ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ–೧೩೭

# ಅಡಕೆ

ಜಿ. ವಿ. ಬಿ. ನಾಯಿಡು






ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೭೫

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ–೧೩೬

# ಅಡಕೆ

ಜಿ. ವಿ. ಬಿ. ನಾಯಿಡು




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೫

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾ ನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶಹೊಂದದ ಸಾಮಾನ್ಯ ಜನರ ಹೃದಯ ವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸ ಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷ ಗಳು ಪಾಠಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾ[illegible] ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿ[illegible] ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊ[illegible] ಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತ ವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಸಮಾ[illegible] ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕ[illegible]

ಮುಂತಾದ ವಿಷಯಗಳನ್ನು ಕುರಿತ ನೂರ ಮೂವತ್ತೈದು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಜಿ. ವಿ. ಬಿ. ನಾಯಿಡು ಅವರ 'ಅಡಕೆ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು
೨೪-೫-೧೯೬೫

ಕೆ. ಎಲ್. ಶ್ರೀಮಾಲಿ
ವೈಸ್-ಛಾನ್ಸಲರ್

# ಅಡಕೆ

೧

ತಾಂಬೂಲ ಚರ್ವಣವು ನಮ್ಮ ದೇಶದಲ್ಲಿ ಒಂದು ವಿಶೇಷ ಮಹತ್ವವನ್ನು ಪಡೆದ ಪದ್ಧತಿಯಾಗಿದ್ದು—ಬೆಳೆಯುತ್ತಿದೆ. ಅನಾದಿಕಾಲದಿಂದಲೂ ಬಳಕೆಗೆ ಬಂದ ನಮ್ಮ ದೇಶದ ಆಚಾರ ಗಳಲ್ಲಿ ಇದು ಉನ್ನತಸ್ಥಾನ ಗಳಿಸಿದೆ. ಮದುವೆ ಮುಂಜಿಗಳೂ, ಪೂಜೆಪುನಸ್ಕಾರಗಳೂ, ಮರ್ಯಾದೆ ಮಾನ್ಯತೆಗಳೂ ತಾಂಬೂಲ ವಿಲ್ಲದೆ ಜರಗಲಾರವು. ಶುಭಕಾರ್ಯಗಳಿಗೆ ಆಹ್ವಾನಿಸುವುದು ಇದರಿಂದ ಪ್ರಾರಂಭವಾಗಿ, ಔತಣವು ಮುಕ್ತಾಯವಾಗುವುದೂ ಇದರಿಂದಲೇ. ಶುಭ, ಅಶುಭಕ್ಕೂ ಒಂದೇ ರೀತಿಯಲ್ಲಿ ಉಪ ಯೋಗಿಸಲ್ಪಡುವ ವಸ್ತುಗಳಲ್ಲಿ ಇದು ಮುಖ್ಯವಾದದ್ದು.

ತಾಂಬೂಲದ ಉಪಯೋಗವು ಭಾರತದಲ್ಲಿ ಮಾತ್ರವಲ್ಲದೆ, ಉಷ್ಣವಲಯದ ಅನೇಕ ದೇಶಗಳಲ್ಲಿ ಸಾಮಾನ್ಯವಾಗಿ ರೂಢಿ ಯಲ್ಲಿದೆ. ಬರ್ಮಾ, ಇಂಡೊನೇಷ್ಯ, ವಿಯತ್‌ನಾಮ್, ದಕ್ಷಿಣ ಚೀಣ, ತಾಯ್‌ಲ್ಯಾಂಡ್, ದಕ್ಷಿಣ ಆಫ್ರಿಕಾದ ಕೆಲವು ಭಾಗಗಳು, ಮಲಯಾ, ಸಿಲೋನ್, ಮೆಕ್ರೋನೀಶಿಯಾ, ಟಿಕೋಪಿಯಾ ಮೊದಲಾದ ದೇಶಗಳಲ್ಲಿ ನಮ್ಮ ದೇಶ ದಲ್ಲಿದ್ದಂತೆಯೇ ಇದು ಉಪಯೋಗಿಸಲ್ಪಡುತ್ತಿದೆ. ಇದರ ಉಪಯೋಗವು ಮೊದಲು ಎಲ್ಲಿ ಪ್ರಾರಂಭವಾಯಿತೆಂದು ನಿಗದಿ ಯಾಗಿ ಹೇಳಲು ಬರುವಂತಿಲ್ಲ. ಅಡಕೆಯ ಜಾತಿಗೆ ಸೇರಿದ ಅನೇಕ ಬಗೆಯ ಮರಗಳು ಸ್ವಾಭಾವಿಕವಾಗಿ ಬೆಳೆಯುವುದ ರಿಂದಲೂ, ಇದು ಬಹುಶಃ ಫಿಲಿಫೈನ್ಸ್–ಬೋರ್ನಿಯೋ ದೇಶ ಗಳಲ್ಲೋ, ಅವುಗಳ ಸಮೀಪ ರಾಜ್ಯಗಳಲ್ಲೋ ಮೊದಲು

ಪ್ರಾರಂಭವಾಗಿರಬೇಕೆಂದು ಕೆಲವರ ಅಭಿಪ್ರಾಯ. ಆದ ಧಾರ್ಮಿಕ ಕಾರ್ಯಗಳಲ್ಲಿ ಬಹು ಪ್ರಾಮುಖ್ಯ ಐತಿಹ್ಯವನ್ನು ಹೊಂದಿದ್ದ ತಾಂತ್ರಿಕ ಪದ್ಧತಿಯವರಲ್ಲಿ ಇದು ಕ್ರಿಸ್ತ ಶಕಕ್ಕೆ ಬಹಳ ಹಿಂದೆ ಆಚರಣೆಯಲ್ಲಿದ್ದುದರಿಂದ, ಇಂತಹ ಆಚಾರ್ಯರುಗಳು ಒಂದು ಹೊರದೇಶದ ಬಳ್ಳಿಗೆ ತಮ್ಮ ಧಾರ್ಮಿಕ ಕಾರ್ಯಗಳಲ್ಲಿ ಪ್ರಶಸ್ತ ಸ್ಥಾನವನ್ನು ಕೊಟ್ಟಿರ ಲಾರರು. ಆದ್ದರಿಂದ ತಾಂಬೂಲ ಚರ್ವಣ ಪದ್ಧತಿಯು ನಮ್ಮ ದೇಶದ್ದೇ ಆದ ಒಂದು ವಿಶಿಷ್ಟ ಪದ್ಧತಿಯೆಂದೂ, ತಾಂತ್ರಿಕ ಆಚಾರಗಳ ಪ್ರಸಾರದೊಡನೆ ಅದರ ಉಪಯೋಗವು ನಮ್ಮ ದೇಶದಲ್ಲಿ ಅಭಿವೃದ್ಧಿಯಾಗಿ ಪರದೇಶಗಳಿಗೂ ಹರಡಿರಬಹು ದೆಂದೂ ಇತರರು ಊಹಿಸುತ್ತಾರೆ.

ಭಾರತದಲ್ಲಿ ತಾಂಬೂಲ ಸೇವನೆಯು ವೇದಗಳ ಕಾಲ ದಿಂದಲೂ ಪ್ರಚಲಿತವಾಗಿದ್ದು, ಕ್ರಿಸ್ತ ಶಕಕ್ಕೆ ಬಹಳ ಹಿಂದಿ ನಿಂದಲೂ ಬಳಕೆಯಲ್ಲಿದೆ. ಬಹುಶಃ ಆಗ ಅಡಕೆಯನ್ನು ಪರ ದೇಶಗಳಿಂದ ಆಮದುಮಾಡಿಕೊಂಡಿರಬಹುದೆಂದೂ, ಕಾಲ ಕ್ರಮೇಣ ಅದರ ಬೆಳವಣಿಗೆ ನಮ್ಮ ದೇಶದಲ್ಲಿ ಪ್ರಾರಂಭವಾಗಿರ ಬೇಕೆಂದೂ ಕಾಣುತ್ತದೆ. ಪುರಾತನ ವೈದಿಕ ಗ್ರಂಥಗಳಾದ ವೈದಿಕ ಸಂಹಿತೆ, ಬ್ರಾಹ್ಮಣ, ಸ್ಮಾರ್ತ ಮತ್ತು ಧರ್ಮಸೂತ್ರ ಗಳಲ್ಲೂ, ಮನು ಮತ್ತು ಯಾಜ್ಞವಲ್ಕ್ಯ ಸ್ಮೃತಿಗಳಲ್ಲೂ ಇದರ ಪ್ರಸ್ತಾಪ ಇಲ್ಲ. ಆದರೆ ಅದರ ಬಳಕೆಯು ತಾಂತ್ರಿಕ ಸಂಪ್ರ ದಾಯದವರಲ್ಲಿ ಹೆಚ್ಚಾಗಿದ್ದು ತಾಂತ್ರಿಕ ಗ್ರಂಥಗಳಾದ ಪುರಾಣ ಮುಂತಾದವುಗಳಲ್ಲಿ ಹೇಳಲ್ಪಟ್ಟಿದೆ. ಇದರಿಂದ ಈ ಪದ್ಧತಿಯು ಮೊದಲು ತಾಂತ್ರಿಕ ಸಂಪ್ರದಾಯದವರಲ್ಲಿ ಪ್ರಾರಂಭವಾಗಿ, ಹರಡಿ, ಹೆಚ್ಚಿನ ಬಳಕೆಯಲ್ಲಿತ್ತೆಂದೂ, ಮೊದಲು ವೈದಿಕರು

ಇದರ ಉಪಯೋಗವನ್ನು ನಿಷೇಧಿಸಿದ್ದರೂ ಕಾಲಕ್ರಮೇಣ ತಾಂತ್ರಿಕ ಆಚಾರಗಳು ಹೆಚ್ಚಿದಂತೆಲ್ಲಾ ಇದರ ಬಳಕೆ ಸಾರ್ವತ್ರಿಕವಾಗಿ ಹಬ್ಬಿದಂತೆ ಕಾಣುತ್ತದೆ. ಇದಕ್ಕೆ ಇದರ ಉಪಯುಕ್ತತೆಯೂ ಒಂದು ಮುಖ್ಯ ಕಾರಣವಾಗಿರಬಹುದು.

ಅಡಕೆ ಬೆಳೆಯು ನಮ್ಮ ದೇಶದಲ್ಲಿ ಕ್ರಿಸ್ತ ಶಕಕ್ಕೆ ಮೊದಲು ಬೆಳೆಯುತ್ತಿತ್ತೆಂಬುದಕ್ಕೆ ಅನೇಕ ಪುರಾವೆಗಳಿವೆ. ವೇದಗಳ ಕಾಲವನ್ನು ಒಪ್ಪಿಕೊಂಡಲ್ಲಿ, ತಾಂಬೂಲದ ಉಪಯೋಗವು ಕ್ರಿ.ಪೂ. ೧೫೦೦ ವರ್ಷಕ್ಕಿಂತಲೂ ಹಿಂದೆಯೇ ಇದ್ದಂತೆ ತೋರುತ್ತದೆ. ಸ್ಕಾಂದ ಪುರಾಣದ ನಾಗರಖಂಡದಲ್ಲಿ ತಾಂಬೂಲೋತ್ಪತ್ತಿ ವರ್ಣನೆಯು ಅತಿ ಸ್ವಾರಸ್ಯವಾಗಿ ನಿರೂಪಿಸಲ್ಪಟ್ಟಿದೆ. ಋಗ್ವೇದದಲ್ಲಿ ಅಡಕೆ ಮರದ ವರ್ಣನೆಯಿದ್ದು, ಅದು ದೇವಜಾತ ಅಥವಾ ಕಲ್ಪವೃಕ್ಷವೆಂದು ಕರೆಯಲ್ಪಟ್ಟಿದೆ. ರಾಮಾಯಣದಲ್ಲಿ ರಾವಣನು ಮಾರೀಚನನ್ನು ನೋಡಲು ಹೋಗುವಾಗ ದಾರಿಯಲ್ಲಿ ಅಡಕೆ ಮರವನ್ನು ನೋಡಿದುದಾಗಿ ವರ್ಣನೆಯಿದೆ. ಮಹಾಭಾರತದಲ್ಲಿ ದ್ವಾರಕಾ ವರ್ಣನೆಯಲ್ಲಿ ಅಡಕೆ ಮರಗಳು ಹೇರಳವಾಗಿ ಬೆಳೆಯುತ್ತಿತ್ತೆಂದು ತಿಳಿಯಬರುತ್ತದೆ.

ಇದರ ವರ್ಣನೆಯು ಅನೇಕ ಪುರಾತನ ಗ್ರಂಥಗಳಲ್ಲಿ ಕಂಡುಬಂದರೂ ಇತಿಹಾಸದ ಜೀವನಾಡಿಗಳಾದ ಶಾಸನಗಳಲ್ಲಿ ಕ್ರಿಸ್ತ ಪೂರ್ವಕ್ಕೆ ಹಿಂದಿನ ಶಾಸನಗಳಲ್ಲಿ ಇದರ ಉಲ್ಲೇಖ ಸಿಕ್ಕಿಲ್ಲ. ಸುಮಾರು ಕ್ರಿ. ಶ. ೪೭೩ನೇ ವರ್ಷದ್ದೆಂದು ಪರಿಗಣಿಸಲ್ಪಟ್ಟ ಮಂಡಸೋರ್ ಬಳಿ ಸಿಕ್ಕಿದ ಗುಪ್ತರ ಶಾಸನದಲ್ಲಿ ಇದರ ಮೊದಲ ಉಲ್ಲೇಖನ ಕಂಡುಬಂದಿದೆ. ಅಲ್ಲಿಂದ ಮುಂದೆ ತಾಂಬೂಲದ ಮತ್ತು ಅದಕ್ಕೆ ಬೇಕಾದ ಅಡಕೆ ಮರಗಳ

ಬೆಳವಣಿಗೆ ಮತ್ತು ದಾನದ ಅನೇಕ ಶಾಸನಗಳು ಸಿಕ್ಕಿವೆ. ಇವುಗಳಿಂದ ಕ್ರಿ. ಪೂ. ೧೫೦೦ಕ್ಕಿಂತ ಹಿಂದೆ ಪ್ರಾರಂಭವಾದ ತಾಂಬೂಲ ಸೇವನೆಯು ಸುಮಾರು ಕ್ರಿಸ್ತ ಶಕ ಪ್ರಾರಂಭದ ಸಮಯದಲ್ಲಿ ಬಹಳ ಬೇಗ ಹರಡಿದಂತೆ ಕಾಣುತ್ತದೆ. ಮುಂದ ೫–೬ನೇ ಶತಮಾನಗಳಲ್ಲಿ ಅದಕ್ಕೆ ಬಹು ಹೆಚ್ಚಿನ ಪ್ರಾಮುಖ್ಯತ ಸಿಕ್ಕಿದೆ.

ತಾಂಬೂಲದ ಉಪಯುಕ್ತತೆಯನ್ನೂ ಅದು ಕಾಮೋ ತ್ತೇಜಕ ವಸ್ತುವೆಂದೂ ಚರಕ–ಶುಶ್ರುತರು ಕ್ರಿ. ಪೂ. ೧ನೇ ಶತಮಾನದಲ್ಲೇ ತಿಳಿಸಿದ್ದಾರೆ. ಅದರ ಸೇವನೆಯಲ್ಲಿ ಅನೇಕ ಗುಣಾತಿಶಯಗಳಿರುವುದು ಅದರ ಪ್ರಚಾರಕ್ಕೆ ಹೆಚ್ಚು ಸಹಕಾ ಯಾಗಿರಬಹುದು. ಆಯುರ್ವೇದ ಶಾಸ್ತ್ರವೂ ಪಾಶ್ಚಾತ್ಯ ವೈದ್ಯಶಾಸ್ತ್ರವೂ ಅದರ ಉಪಯುಕ್ತತೆಯನ್ನು ಒಪ್ಪಿಕೊಂಡಿವೆ ಧನ್ವಂತರಿ (ವೈದ್ಯ) ಗ್ರಂಥದಲ್ಲಿ

ತಾಂಬೂಲಂ ಕಟುತಿಕ್ತಮುಷ್ಣ ಮಧುರಂ
ಕ್ಷಾರಂ ಕಷಾಯಾನ್ವಿತಂ
ವಾತಘ್ನಂ ಕಫನಾಶನಂ ಕ್ರಿಮಿಹರಂ
ದುರ್ಗಂಧಿ ನಿರ್ನಾಶನಂ।
ವಕ್ತ್ರಸ್ಯಾಭರಣಂ ವಿಶುದ್ಧಿಕರಣಂ
ಕಾಮಾಗ್ನಿ ಸಂದೀಪನಂ
ತಾಂಬೂಲಸ್ಯ ಸಖೇ ತ್ರಯೋದಶ
ಗುಣಾಃ ಸ್ವರ್ಗೇऽಪಿತೇ ದುರ್ಲಭಾಃ॥

"ತಾಂಬೂಲವು ಖಾರ, ಕಹಿ, ಸಿಹಿ, ಉಪ್ಪು ಮತ್ತು ಒಗರು ರಸಗಳಿಂದ ಕೂಡಿದ್ದು, ಉಷ್ಣಕರವಾದದ್ದು. ಇದ

ವಾತ ಕಫಗಳನ್ನು ನಾಶಮಾಡುವುದಲ್ಲದೆ ಹೊಟ್ಟೆಯಲ್ಲಿರುವ ಕ್ರಿಮಿಗಳನ್ನು ನಾಶಪಡಿಸಿ (ಬಾಯಿಯಲ್ಲಿನ) ದುರ್ಗಂಧವನ್ನು ಹೋಗಲಾಡಿಸುತ್ತದೆ, ಮತ್ತು ಬಾಯಿಯನ್ನು ಶುದ್ಧಪಡಿಸಿ ಅಲಂಕರಿಸುವುದಲ್ಲದೆ, ಕಾಮವನ್ನು ವೃದ್ಧಿಗೊಳಿಸುತ್ತದೆ. ಅಂತೆಯೇ ತಾಂಬೂಲದಲ್ಲಿ ಸ್ವರ್ಗದಲ್ಲೂ ದುರ್ಲಭವಾದ ೧೩ ಗುಣಗಳು ಇರುತ್ತವೆ" ಎಂದು ತಿಳಿಸಿದೆ. ಮಕ್ಕಳಿಗೆ ಇದರ ರಸ ಬಹಳ ಒಳ್ಳೆಯದು. ಇದರ ಉಪಯೋಗದಿಂದ ಹಲ್ಲುಗಳು ಗಟ್ಟಿಯಾಗಿ, ಬಾಯ ದುರ್ಗಂಧ ದೂರವಾಗಿ, ಕಂಠ ಮಧುರ ವಾಗಿ, ತುಟಿಗಳು ಕೆಂಪಾಗಿ, ಮುಖಕ್ಕೆ ಹೆಚ್ಚಿನ ಕಾಂತಿ ಯುಂಟಾಗುತ್ತದೆ. ಜೀರ್ಣಶಕ್ತಿ ವೃದ್ಧಿಯಾಗುತ್ತದೆ. ಕೆಲವು ಪಾಶ್ಚಾತ್ಯ ವೈದ್ಯಪದ್ಧತಿಗಳಿಗೆ ಇದು ಹಿನ್ನೆಲೆಯಾಗಿರಬಹು ದೆಂದು ಕಾಣುತ್ತದೆ. ಇತ್ತೀಚೆಗೆ ಎಲೆಗಳಲ್ಲಿರುವ "ಕ್ಲೋರೋ ಫಿಲ್" ಸೇವನೆಯಿಂದ ಬಾಯಿಯ ದುರ್ಗಂಧ ಹೋಗುವು ದೆಂದೂ ಅದನ್ನು ಮಾತ್ರೆಯಾಗಿಯೂ 'ಟೂತ್‌ಪೇಸ್ಟ್' ಆಗಿಯೂ ಉಪಯೋಗಿಸಲ್ಪಡುತ್ತಿರುವುದು ವೀಳೇದೆಲೆಯ ಸೇವನೆಯಲ್ಲಿರುವ ಉಪಯುಕ್ತತೆಯ ಆಧಾರವಿರಬಹುದು. ಇವರಲ್ಲಿನ ಸುಣ್ಣ ಹಲ್ಲು ಮತ್ತು ರಕ್ತಶುದ್ಧಿಗೆ ಕಾರಣ ವಾಗಿದ್ದು, 'ಸುಣ್ಣಾಂಶದ' (ಕ್ಯಾಲ್ಸಿಯಂ) ಮಾತ್ರೆಗಳ ಸೇವನೆಯು ಅನವಶ್ಯವಾಗಿತ್ತು. ಆದ್ದರಿಂದಲೇ ತಾಂಬೂಲ ವನ್ನು ಬಾಣಂತಿಯರಿಗೆ ಬಹಳ ಹೆಚ್ಚಾಗಿ ಉಪಯೋಗಿಸಲು ಕೊಡುತ್ತಿದ್ದದ್ದು. ಸೋಮದೇವನು ತನ್ನ 'ಕಥಾಸರಿತ್ಸಾಗರ' ದಲ್ಲಿ ಇದನ್ನು ಪಂಚಫಲಗಳಲ್ಲಿ ಒಂದೆಂದು ಉಲ್ಲೇಖಿ ಸಿದ್ದಾನೆ. ವಾಗ್ಭಟನ "ಅಷ್ಟಾಂಗಹೃದಯ"ದಲ್ಲಿ ಇದರ ಮಹಿಮೋಲ್ಲೇಖವಿದೆ. ಅದರ ಉಪಯುಕ್ತತೆಯಿಂದಲೇ

ಸರ್ವಜ್ಞಮೂರ್ತಿ “ಬೆಲೆವೆಣ್ಣಿನಾ ಬಾಯಿ। ಹಲವೆಂಜಲೆನ
ಬೇಡ। ಹುಳಿ ಮುಟ್ಟೆ ಕಿಲುಬು ಕೆಡುವಂತೆ ಬಾಯವಳ
ಎಲೆ ಮೆಲಲು ಶುದ್ಧ ಸರ್ವಜ್ಞ॥” ಎಂದು ತಾಂಬೂಲ
ಸೇವನೆಯಿಂದಾಗುವ ಶುದ್ಧಿಯನ್ನು ಹೊಗಳಿದ್ದಾನೆ.

“ನಾಗರಿಕ ಎಲ್ಲಿ ಹೋದರೂ ಅವನ ಜೊತೆಯಲ್ಲಿ
ಪ್ರಣಯಿನಿಯಂತೆ ಹಿಂಬಾಲಿಸುತ್ತದೆ ಈ ತಾಂಬೂಲ. ಪ್ರಣಯ
ಕದನಕ್ಕೆ, ಕಾಮಚೇಷ್ಟೆಗೆ ಬಿಲ್ಲು ಬಾಣಗಳು ಈ ಎಲೆ
ಅಡಕೆಗಳು.” ತುಟಿಯನ್ನು ಕೆಂಪಾಗಿಸಿ ಸೌಂದರ್ಯವನ್ನು
ಹೆಚ್ಚಿಸುವ ಇಂತಹ ವಸ್ತುವನ್ನು ಕವಿಗಳು ಉಪಯೋಗಿಸಿ
ಕೊಳ್ಳದಿರುವರೇ? ಶೃಂಗಾರರಸದಲ್ಲಿ ಇದರ ಸ್ಥಾನ ಅಧಿಕ
ವಾಯ್ತು. ಕಾಳಿದಾಸ, ಶೂದ್ರಕ, ಅಮರುಕ ಮುಂತಾದ
ಕವಿಗಳು ಇದನ್ನು ರಸವತ್ತಾದ ಸನ್ನಿವೇಶಗಳಲ್ಲಿ ವರ್ಣಿಸಿ
ದ್ದಾರೆ. ಕಾಳಿದಾಸನು ತನ್ನ ರಘುವಂಶದಲ್ಲಿ, ರಾಜನು ಅಡಕೆ
ಮರಗಳಿಂದ ತುಂಬಿದ್ದ ತೀರಪ್ರದೇಶವನ್ನನುಸರಿಸಿ ದಕ್ಷಿಣ
ದಿಕ್ಕಿಗೆ ಪ್ರಯಾಣವನ್ನು ಬೆಳೆಸಿದನು ಎಂದು ೪ನೇ ಶ್ಲೋಕ
ದಲ್ಲಿ ವರ್ಣಿಸಿದ್ದಾನೆ. ಅಲ್ಲದೆ ಅಡಕೆ ತೋಟಗಾರರನ್ನು
“ಸಾಮಂತರಿಗೆ” ಹೋಲಿಸಿದ್ದಾನೆ. ಆದ್ದರಿಂದ ಕಾಳಿದಾಸನ
ಕಾಲಕ್ಕೆ (ಕ್ರಿ. ಪೂ. ೩–೪ ಶತಮಾನ) ಎಲ್ಲೆಲ್ಲೂ ಅಡಕೆ
ತೋಟಗಳು ಹೆಚ್ಚಾಗಿದ್ದಿರಬೇಕು. ಮುಂದೆ ೭ ನೇ ಶತಮಾನ
ದಲ್ಲಿ ಹರ್ಷವರ್ಧನನ ಆಸ್ಥಾನದಲ್ಲಿದ್ದ ಬಾಣಕವಿಯು ತನ್ನ
ಕಾದಂಬರಿ ಚರಿತ್ರೆಯಲ್ಲಿ “ತಾಂಬೂಲ ಲತಾವನ ದೇವಪೂಗ
ಖಂಡ ಮಂಡಿತ್ರ್ಯೇಹಿ” ಎಂದು ವರ್ಣಿಸಿದ್ದಾನೆ. ೭ ನೇ ಶತ
ಮಾನದ ವೇಳೆಗೆ ತಾಂಬೂಲದ ಉಪಯುಕ್ತತೆಯು ಎಲ್ಲೆಲ್ಲೂ
ಹೆಚ್ಚಿದ್ದು, ರಾಜರೂ ಸಾಮಂತರೂ ಐಶ್ವರ್ಯವಂತರೂ

ತಾಂಬೂಲ ಮಾಡಿಕೊಡುವಂತ 'ಕರಂಕವಾಹಿನಿ'ಯರನ್ನು ನೇಮಿಸಿಕೊಂಡಿದ್ದುದಾಗಿ ತಿಳಿದುಬರುತ್ತದೆ. ಇದರಿಂದ ಅಡಕೆ ಬೆಳೆಯೂ ಹೆಚ್ಚಾಗಿ ಬೆಳೆಯುತ್ತಿದ್ದಿರಬೇಕು. ವಿಷ್ಣುಶರ್ಮನು ತನ್ನ ಪಂಚತಂತ್ರದಲ್ಲಿ

ಆದಿತ್ಯ ಸ್ಯೋದಯಸ್ನಾತಃ ತಾಂಬೂಲಂ ಭಾರತೀ ಕಥಾ ।
ಇಷ್ಟ ಭಾರ್ಯಾ ಸುಹೃನ್ಮಿತ್ರಂ ಅಪೂರ್ಣಾನಿ ದಿನೇದಿನೇ ॥

ಎಂದು ವಿವರಿಸಿ, ತಾಂಬೂಲಕ್ಕೆ ಬಹು ಮಹತ್ವದ ಸ್ಥಾನ ವನ್ನು ಕೊಟ್ಟಿದ್ದಾನೆ. ಬಾಣನು ತನ್ನ 'ಕಾದಂಬರಿ'ಯಲ್ಲಿ ಕಾದಂಬರಿಯು ಚಂದ್ರಾಪೀಡನಿಗೆ ತಾಂಬೂಲ ಕೊಡುವು ದನ್ನೂ, ದ್ರವಿಡಧಾರ್ಮಿಕನಿಗೆ ಕೊಟ್ಟ ತಾಂಬೂಲವನ್ನೂ ರಸವತ್ತಾಗಿ ವರ್ಣಿಸಿದ್ದಾನೆ. ಕುಮಾರವ್ಯಾಸ, ಮುದ್ದಣ್ಣ, ಕವಿಗಳೂ ಇದನ್ನು ಬಿಟ್ಟಿಲ್ಲ. ಅವರೆಲ್ಲರಿಗೂ 'ತಾಂಬೂಲ' ವಿಲ್ಲದೆ ಶೃಂಗಾರರಸವಿಲ್ಲ ಎನ್ನುವಂತಿತ್ತೋ ಏನೋ! ಅದ ರಿಂದಲೇ "ಎಲೆಯ ಮೆಲ್ಲದ ಬಾಯಿ। ತಲೆಹೋದ ಮುಂಡವು। ಎಲೆ ಮೆದ್ದು ಬರಲು ಬೀದಿಯೊಳಗೀರೈದು ತಲೆಯನಂತಕ್ಕು" ಎಂದು ಸರ್ವಜ್ಞ ಕವಿಯು ಹಾಡಿರುವುದು. ಇದರ ತುಟಿ ಗೆಂಪೇ ಇಂದಿನ ಆಧುನಿಕ ಮಹಿಳೆಯರ ಶೃಂಗಾರಕ್ಕೆ ಆಧಾರ ವಾದ 'ತುಟಿವರ್ಣಿಕ'ದ (ಲಿಪ್‌ಸ್ಟಿಕ್) ತಳಹದಿಯಾಗಿರಬೇಕು.

ಅಡಕೆ, ಕಾಚು, ಲವಂಗ, ಜಾಯಿಕಾಯಿ, ಜಾಯಿಪತ್ರೆ, ಯಾಲಕ್ಕಿ, ದಾಲ್ಚಿನ್ನಿ, ವೀಳೇದೆಲೆ, ಸುಣ್ಣ, ಅಂಕೋಲೆ, ಕಸ್ತೂರಿ, ಬಾದಾಮಿ, ಕೇಸರಿ–ಈ ಹದಿಮೂರು ವಸ್ತುಗಳಿಂದ ಕೂಡಿದ ತಾಂಬೂಲವು ಕಾಮನ ಸಂಖ್ಯೆಯನ್ನು ಸೂಚಿಸುವುದ

ರಿಂದ ಶ್ರೇಷ್ಠವೆಂದು ಭೂಪದೇವನು ಹೇಳಿರುತ್ತಾನೆ. ವಸ್ತ್ರ
ವ್ಯತ್ಯಾಸವಿದ್ದರೂ ಹದಿಮೂರು ಸಂಖ್ಯೆ ಇರಲೇಬೇಕು. ಪಚ್ಚ
ಕರ್ಪೂರ, ಚಿನ್ನದ ಅದಿರು ಸೇರಿಸಿದ ಬಹು ಬೆಲೆಯ ತಾಂಬೂಲ
ನವಾಬರುಗಳ ಉಪಯುಕ್ತವಾದರೆ, ಬರೀ ವೀಳೇದೆಲೆ
ಅಡಕೆ, ಸುಣ್ಣದ ತಾಂಬೂಲವು 'ಬಡವರಬಂಧು' ಆಗಿದೆ
'ತಾಂಬೂಲವು' ಮಧು (ಮದ್ಯ), ವಿಚಿತ್ರವಾದ ಹೂವಿನ ಹಾ
ಗಳು, ಒಳ್ಳೆಯ ಗಿಡಗೆಂಟೆಗಳುಳ್ಳ ಕಾಡು, ವಿಲಾಸಿನಿಯರು
ಮನೋಹರವಾದ ಸಂಗೀತ, ಶ್ರೇಷ್ಠ ಅನ್ನವು ನಪುಂಸಕ
ರಿಗೂ ಕಾಮುವನ್ನುಂಟುಮಾಡುತ್ತದೆ" ಎಂದು ಭರದ್ವಾಜರು
ಹೇಳಿದ್ದಾರೆ. ಹೀಗೆ ತಾಂಬೂಲವು ನಮ್ಮ ದೇಶದಲ್ಲಿ ಸುಖ
ವನ್ನು ಕೊಡುವ ಭೋಗವಸ್ತುವಾಗಿಯೂ ಅರಸರಿಗೂ, ಆಳು
ಗಳಿಗೂ, ಶ್ರೀಮಂತರಿಗೂ, ಬಡವರಿಗೂ, ಹೆಂಗಸರಿಗೂ,
ಗಂಡಸರಿಗೂ ಒಂದೇ ರೀತಿಯ ಇಷ್ಟತಮ ವಸ್ತುವಾಗಿಯೂ
ಬೆಳೆದುಬರುತ್ತಿದೆ. ಚಾರುಲಾಲ ಮುಖರ್ಜಿಯವರು ಹೇಳಿರು
ವಂತೆ "ಮನುಷ್ಯನನ್ನು ಹುಟ್ಟಿದಾಗ ಸ್ವಾಗತಿಸಿ, ವಿವಾಹ
ಕಾಲದಲ್ಲಿ ಜೊತೆಯಾಗಿ, ಸತ್ತಾಗ ಸಾಗಹಾಕುವಂಥ ವಸ್ತು
ಇದನ್ನು ಬಿಟ್ಟರೆ ಇನ್ನಾವುದೂ ಇಲ್ಲ."

ಯಾವುದೇ ಒಂದು ಸಾಮ್ರಾಜ್ಯದ, ದೇಶದ ಅಥವಾ
ಬೆಳೆಯ ಅಭಿವೃದ್ಧಿಯು ಆ ಕಾಲದಲ್ಲಿ ಅದರ ಅಭಿವೃದ್ಧಿಗೆ
ಇದ್ದಂಥಾ ಆವಶ್ಯಕತೆ ಮತ್ತು ಸೌಲಭ್ಯ ಇವನ್ನು ಅವಲಂಬಿಸಿದೆ.
ಅಡಕೆ ಬೆಳೆ ಹೆಚ್ಚಲು ತಾಂಬೂಲ ಚರ್ವಣದ ವಿಸ್ತರಣೆಯೇ
ಮುಖ್ಯ ಕಾರಣವಾಯಿತು. ಇದರ ಅಭ್ಯಾಸ ಹೆಚ್ಚಿದಂತೆಲ್ಲಾ
ಅವಕ್ಕೆ ಬೇಕಾದ ವಸ್ತುಗಳ ಹೆಚ್ಚು ಕೇಳಿಕೆಯಾಗಿರಬೇಕು.
ಆದರೆ ಐಶ್ವರ್ಯವಂತರಲ್ಲೇ ಇದರ ಬಳಕೆ ಹೆಚ್ಚಾಗಿದ್ದುದರಿಂದ

ಅದನ್ನು ಬೆಳೆಸಲು ಅವರು ಶಕ್ತಿವಂತರಾಗಿದ್ದರು. ಯಾರು ಯಾವಾಗ ಯಾವ ಸ್ಥಳದಲ್ಲಿ ಅಡಕೆ ಬೆಳೆಯನ್ನು ಮೈಸೂರು ರಾಜ್ಯದಲ್ಲಿ ವಿಸ್ತರಿಸಲು ಏರ್ಪಡಿಸಿದರೆಂಬುದು ಸರಿಯಾಗಿ ಗೊತ್ತಿಲ್ಲ. ಇವೆಲ್ಲಾ ಸಾಹಿತ್ಯದ ಆಧಾರಗಳಿಂದ ಹೇಳಬಹು ದಾದರೂ ಇತಿಹಾಸಕಾರನಿಗೆ ಮುಖ್ಯ ಆಧಾರವಾದ ಶಾಸನ ಗಳಲ್ಲಿ ಕ್ರಿಸ್ತ ಪೂರ್ವಕ್ಕೆ ಇದರ ಉಲ್ಲೇಖನವಿಲ್ಲ. ಕ್ರಿ. ಶ. ೪೭೩ ರದೆಂದು ಕಂಡುಬಂದ ಮುಂಡಸೂರದ ಬಳಿ ಸಿಕ್ಕಿರುವ ಶಾಸನದಲ್ಲಿ 'ತಾಂಬೂಲ'ದ ಉಲ್ಲೇಖ ಪ್ರಪ್ರಥಮವಾಗಿ ಕಂಡುಬಂದಿದೆ. ಅಡಕೆ ಕ್ರಿ. ಶ. ೧೦೦೦ಕ್ಕೆ ಮೇಲೆ ಅನೇಕ ಶಾಸನಗಳಲ್ಲಿ ವಿವರಿಸಲ್ಪಟ್ಟಿದೆ. ಇವುಗಳಲ್ಲಿ ಗದಗದ ಬಳಿ ಹೊಸೂರಿನಲ್ಲಿನ ಕ್ರಿ. ಶ. ೧೦೨೮ ನೇ ಇಸವಿಯ ಶಾಸನದಲ್ಲೂ ಧಾರವಾಡದ ಬಳಿ ಸಿಕ್ಕಿರುವ ಕ್ರಿ. ಶ. ೧೦೬೧ ನೇ ವರ್ಷದ ಶಾಸನದಲ್ಲೂ ಅಡಕೆ ಬೆಳೆಯ ಪ್ರಪ್ರಥಮ ಉಲ್ಲೇಖನವಿರು ವುದರಿಂದ, ಅಡಕೆ ಬೆಳೆಯು ರತ್ನಗಿರಿಯಿಂದ ಮೈಸೂರಿನ ಸೊರಬ-ಶಿಕಾರಿಪುರದ ಕಡೆಗೆ, ಗದಗ–ಧಾರವಾಡದ ಮೂಲಕ ಹರಡಿರಬೇಕೆಂದು ಊಹಿಸಬಹುದಾಗಿದೆ.

ಈ ಪ್ರಾಂತವನ್ನು ಬಲಿಷ್ಠರಾದ ರಾಷ್ಟ್ರಕೂಟರು, ವಾತಾಪಿ (ಈಗಿನ ಬಾದಾಮಿ)ಯನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡು ಆಳುತ್ತಿದ್ದರು. ಅವರನ್ನು ಕೆಲಕಾಲ ಚಾಳುಕ್ಯರು ಸೋಲಿಸಿದ್ದರೂ ೭ನೇ ಶತಮಾನದಲ್ಲಿ ಪುನಃ ತಮ್ಮ ಪ್ರಾಮು ಖ್ಯತೆಯನ್ನು ಬೆಳೆಸಿಕೊಂಡಿದ್ದರು. ಇವರು ಶಕ್ತಿಯುತರೂ, ಶಾಂತಿದಾಯಕರೂ ಮತ್ತು ದೇಶದ ಅಭಿವೃದ್ಧಿಯಲ್ಲಿ ಅನು ರಕ್ತರೂ ಆಗಿದ್ದರು. ಎಲ್ಲೋರ, ಅಜಂತ ಗುಹೆಗಳು ಇವರ ಕಾಲದ ಚಿರಸ್ಮರಣೀಯ ಕೃತಿಗಳು. ಇವರು ಎಲ್ಲೆಲ್ಲೂ ಅನೇಕ

ಕೆರೆಗಳನ್ನು ಕಟ್ಟಿಸಿದುದಾಗಿ ಕಂಡುಬರುತ್ತದೆ. ನೀರಿನ ವಸ
ಹೆಚ್ಚಾದಲ್ಲೆಲ್ಲಾ ಅಡಕೆ ಬೆಳೆಯ ಹೆಚ್ಚಳ ಸುಲಭವಾ
ಆಗಿರಬೇಕು. ಎರಡನೆಯ ಪುಲಿಕೇಶಿಯ ಕಾಲದಲ್ಲಿ ಬಂದಿ
ಚೈನಾಯಾತ್ರಿಕ ಹ್ಯೂಯಂತ್ಸಿಯಾಂಗನು ಆ ರಾಜ್ಯ
ವಿವರಣೆಯಲ್ಲಿ ಅಡಕೆ ಬೆಳೆಯ ವಿವರಣೆಯನ್ನು ವಿವರಿಸಿಲ್ಲ
ಆದರೆ ಮುಂದೆ ಸುಮಾರು ಕ್ರಿ. ಶ. ೧೦೭೬ರಲ್ಲಿ ರಾಜ್ಯವಾಳಿ
೬ನೇ ವಿಕ್ರಮಾದಿತ್ಯನ ಕಾಲದಲ್ಲಿ ಅಡಕೆ ಬೆಳೆಯು ಎಲ್ಲೆಲ್ಲ
ಇದ್ದಂತೆ ವಿವರಗಳಿವೆ. ಆದ್ದರಿಂದ ಈ ಪ್ರಾಂತದಲ್ಲಿ ೭ನೇ
ಶತಮಾನದಿಂದ ೧೦ ನೇ ಶತಮಾನಗಳೊಳಗೆ, ಅಡಕೆ ಬೆಳೆಯು
ಪ್ರಧಾನವಾಗಿ ಹರಡಿರುವುದು ಕಂಡುಬರುತ್ತದೆ.

ಕ್ರಿ. ಶ. ೧೧೯೮ ನೇ ವರ್ಷದ್ದೆಂದು ಪರಿಗಣಿಸಲ್ಪಟ್ಟ ಶಿಕಾ
ಪುರದ ಶಿಲಾಶಾಸನದಲ್ಲಿ (ನಂ. ೧೦೬, ಶಿಕಾರಿಪುರ) ಕುಂತ
ರಾಜ್ಯದಲ್ಲಿ ಅನೇಕ ತೋಟಗಳಿದ್ದುವೆಂದೂ, ಅವುಗಳಲ್ಲಿ ಎ
ಹಂಬೂ, ಅಡಕೆ ಮರಗಳೂ ಹೇರಳವಾಗಿದ್ದುವೆಂದೂ ತಿಳಿದ
ಬರುತ್ತದೆ. ಅದೇ ತಾಲ್ಲೂಕಿನ ೨೨೫ ನೇ ಶಿಲಾಶಾಸ
ದಲ್ಲಿ "ನಾಗರಖಂಡದೊಳೆಸವುದೆಸೆವ ಭಾಂಧವನಗರಂ ‖ ವಿ
ಅದು ಬಳಸಿರ್ದ ನಂದನದಿನಂ ಬುಜಷಂಡದಿನೊಳ್ಗವುಂಗಿನಿ
ಪುದಿದೆಲೆವಳ್ಳಿಯಿಂ ........... ನಗುತಿರ್ಪುದೊರ್ಮೆಯುಂ
ಎಂದು ವಿವರಿಸಲ್ಪಟ್ಟಿದೆ. ಶಿಕಾರಿಪುರದ ೧೦೬ ನೇ ಶಾಸ
ದಲ್ಲಿ "ಹಂಸಕೀರ ಕೋಕಿಳ ಸಹಕಾರು ಭೂರುಹ
ನಾವಳಿಯಿಂ ನವನಾಗ ಪೂಗ ಪಾಟಾಳ ಮುಚಕುಂದ....
ಇವೆಲ್ಲವೂ ಕುಂತಳದ ಬಳ್ಳಿಗಾವೆಯನ್ನು ಆವರಿಸಿದ್ದವೆಂದ
ಹೇಳಲ್ಪಟ್ಟಿದೆ. ಆರನೇ ವಿಕ್ರಮಾದಿತ್ಯನ ಕಾಲಕ್ಕೆ ಕಲ್ಯಾಣ
ಕುಂತಲದ ರಾಜಧಾನಿಯಾಯಿತು. ಸುಮಾರು ಕ್ರಿ. ಶ. ೧೧೪೫

ದೆಂದು ಪರಿಗಣಿಸಲ್ಪಟ್ಟ ಸೊರಬ ತಾಲ್ಲೂಕಿನ ೧೩೮ ನೇ ಶಾಸನ ದಲ್ಲಿ ಕುಂತಳದಲ್ಲಿ "ಅಲ್ಲಲ್ಲಿ ಪರಿವ ಪರಿಕಲ್‌ಗಳಿಂ ಪೂಗ, ಪುನ್ನಾಗ, ನಾಗವಕುಳ ಚಂಪಕಾ, ವಿಚಕಿಲ, ಕೇತಕಿ, ಸುಗಂಧ, ಕನವೀರ ಸೇವಂತಿಕಾ ಸೌರಭಾಭರಿತಂ ಎನಿಪ ಪುಷ್ಪಿ ವಾಟಂಗಳಿಂ। ಕೌಂಗು, ತೆಂಗು ಕದಲಿ ಪನಸಾಂಬ್ರ ಜಂಬೂ ದ್ರುಮಾದಿ ನಂದನಂಗಳಿಂ ಕರ್ತ್ತಳಿಪ ನಾಗವಲ್ಲೀ ವನಂಗಳಿಂ ........ಅತೀವರಮ್ಯಂ ಎನಿಸಿ ಯೋಗಿಗಳ್‌ಗುಂ ಭೋಗಶಕ್ತಿ ಯನ್ ಆಗಿಸುತ್ತಿರಿಪುದ್" ಎಂದು ವರ್ಣಿಸಲ್ಪಟ್ಟಿದೆ. ಮುಂದೆ ಕ್ರಿ. ಶ. ೧೧೮೦ರ ವೇಳೆಗೆ ಕಾಲಚೂರ್ಯ ಚಕ್ರವರ್ತಿ ಬಿಜ್ಜಣನು ರಾಜ್ಯವನ್ನು ಆಕ್ರಮಿಸಿಕೊಂಡಾಗ, ದಾವಣಗೆರೆ೪೪ ನೇ ಶಾಸನ ದಲ್ಲಿ "ಧರೆಯುಂವಾರಿಧಿ ಮೇಖಳೋಲ್ಲಸಿತೆಯುಂ ಲೀಲಾಲತಾ ಪಲ್ಲವಾಧರೆಯುಂ ವಿಸ್ತ್ರಿತಪೀನ ವೃತ್ತಕಠಿನ ಪ್ರೋತ್ತುಂಗ ಭೂಭೃತ್ಪಯೋಧರೆಯುಂ ಬಂಧುರನನ್ದನಾಳಿವಿಳಸತ್ಪೂಗಪ್ರ ಕಾಂಡೋದ್ಭ್ರಕಂಧರೆಯುಂ ದೋರ್ವ್ವಳ ಚಕ್ರವರ್ತಿ ತಳೆದಂ" ಎಂದು ಈ ನಾಡನ್ನು ರಸವತ್ತಾಗಿ ಬಣ್ಣಿಸಿದೆ. ಈ ವರ್ಣನೆಗಳು ನಾಡಿನಲ್ಲಿ ಕ್ರಿ. ಶ. ೧೦೦೦ದಿಂದ ೧೨೦೦ರ ವೇಳೆಗೆ ಎಲ್ಲೆಲ್ಲೂ ಅಡಕೆ, ಎಲೆ ತೋಟಗಳು ಹೆಚ್ಚಾಗಿ ಬೆಳೆದಿದ್ದರೆಂಬ ಅಂಶವನ್ನು ತಿಳಿಸುತ್ತದೆ. ಮೈಸೂರು ಸಂಸ್ಥಾನದಲ್ಲಿ ಇದುವರೆಗೆ ಸಿಕ್ಕಿರುವ ಕ್ರಿ. ಶ. ೪೬೦ಕ್ಕೆ ಮುಂದಿನ ಸಾವಿರಾರು ಶಾಸನಗಳಲ್ಲಿ ಅಡಕೆ ಬೆಳೆಯ ಪ್ರಪ್ರಥಮ ಉಲ್ಲೇಖವು ಸೊರಬ–ಶಿಕಾರಿಪುರ ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಕ್ರಿ. ಶ. ೧೦೭೦ ನೇ ಇಸವಿಯ ಸೊರಬದ ಒಂದು ಶಾಸನದಲ್ಲಿ ಮೊದಲು ಕೆರೆ ಕಟ್ಟಿದ್ದನ್ನೂ ಮುಂದೆ ಕ್ರಿ. ಶ. ೧೨೧೫ರ ವೇಳೆಗೆ ಅಲ್ಲಿ ಅಡಕೆ ಬೆಳೆ ಬೆಳೆ ದಿದ್ದನ್ನೂ ನಿರೂಪಿಸಿದೆ. ಇವೆಲ್ಲದರಿಂದ ಮೈಸೂರು ದೇಶದಲ್ಲಿ,

ಹೆಚ್ಚಾಗಿ ಸೊರಬ–ಶಿಕಾರಿಪುರ ತಾಲ್ಲೂಕಿನಲ್ಲಿ ಅಡಕೆ ಬೆಳೆ ಪ್ರಥಮ ವಿಸ್ತರಣೆಯಾಗಿರಬೇಕೆಂದು ಖಚಿತವಾಗಿ ಹೇಳಬಹುದಾಗಿದೆ.

ಕ್ರಿ. ಶ. ೧೦೫೦ರಿಂದ ೧೩೫೦ರ ವರೆಗೆ ಅಡಕೆ ಬೆಳೆಯ ಮೈದಾನ ಪ್ರದೇಶದಲ್ಲೆಲ್ಲಾ ಬಹಳ ಬೇಗ ಹರಡಿದಂತೆ ಕಾಣುತ್ತದೆ. ಆಗ ಪ್ರಬಲರಾದ ಹೊಯ್ಸಳರು ಎಲ್ಲೆಲ್ಲೂ ಕೆರೆ ಕಟ್ಟೆಗಳನ್ನು ಕಟ್ಟಿಸಿದರು. ಅನೇಕ ಸ್ಥಳಗಳಲ್ಲಿ ಅಡಕೆ ಬೆಳೆಯ ಹೆಚ್ಚಲು ಇದರಿಂದ ಅನುಕೂಲವಾಯಿತು. ಅರಸೀಕೆ "ದಕ್ಷಿಣ ಅಯ್ಯವಾಲೆ" ಎಂದು ಪ್ರಸಿದ್ಧಿಹೊಂದಿದ್ದು ಅ ವ್ಯಾಪಾರದ ಮುಖ್ಯ ಕೇಂದ್ರವಾಗಿದ್ದಿತು. ೨ನೇ ಬಲ್ಲಾಳ ಆಳ್ವಿಕೆಯ ಕಾಲದಲ್ಲಿ ರಾಜ್ಯವು "ಯೋಜನ ಯೋಜನವಾ ವಿಸ್ತರಿಸಿದ್ದು, ಎಲ್ಲೆಲ್ಲೂ ಕೆರೆಗಳಿಂದಲೂ ತೋಟಗಳಿಂದಲೂ ತುಂಬಿತ್ತೆಂದು ತಿಳಿಯುಬರುತ್ತದೆ. ಅರಸೀಕೆರೆಯ ಒಂದು ಕೇರಿಯೇ "ಕೊಯಿಲಾಳರ ಕೇರಿಯೆಂದು" ಹೆಸರಾಗಿತ್ತು. ಇಲ್ಲಿ ಮಲಬಾರಿನಿಂದ ಬಂದಿದ್ದ ಅಡಕೆ ಕೊಯಿಲು ಮಾಡುವವರು ವಸತಿ ಇದ್ದರು. ಇವರು ವೃದ್ಧಿಯಾಗಿ ಅನೇಕ ದೇವಸ್ಥಾನಗಳನ್ನು ಕಟ್ಟಿಸಿ, ಅವಕ್ಕೆ ದಾನಮಾಡಿದ ಶಾಸನಗಳು ಸಿಕ್ಕಿವೆ. ಅಡಕೆ ಕೊಯಿಲುಗಾರರ ಒಂದು ಕೇರಿಯೇ ಇದ್ದಿರಬೇಕಾದರೆ ಅಲ್ಲಿನ ಅಡಕೆ ಬೆಳೆ ಎಷ್ಟು ಹೆಚ್ಚಿದ್ದಿರಬೇಕೆಂಬುದನ್ನು ನಾವು ಊಹಿಸಿಕೊಳ್ಳಬಹುದಾಗಿದೆ. ಇಲ್ಲಿಂದ ಈಗಿನ ಚಿತ್ರದುರ್ಗ ಮೈಸೂರು, ತುಮಕೂರು ಜಿಲ್ಲೆಗಳಲ್ಲೆಲ್ಲಾ ಅನುಕೂಲವಿರುವ ಕಡೆ ಅದರ ವ್ಯಾಪ್ತಿಯು ಹೆಚ್ಚಿಬಂದಿದೆ.

ಮಲೆನಾಡಿನಲ್ಲಿ ಅಡಕೆ ಬೆಳೆಯು ಬಹಳ ಹಿಂದಿನದಲ್ಲ ವೆಂದು ಕಂಡುಬರುತ್ತದೆ. ಮೈದಾನದಲ್ಲಿ ಶ್ರೇಷ್ಠ ರಾಜ್ಯ

ಗಳಿದ್ದಾಗ ಈ ಪ್ರದೇಶವು ದಟ್ಟವಾದ ಕಾಡುಗಳಿಂದ ಆವೃತವಾಗಿತ್ತು. ಮುಸಲ್ಮಾನರ ಹಾವಳಿಯು ಹೆಚ್ಚಾಗಿ ಹೊಯ್ಸಳರ ರಾಜ್ಯವು ಒಡೆದುಹೋಗುವಾಗಲೂ, ಮುಂದೆ ಅನೇಕ ರಾಜ್ಯಗಳಿಗೆ ಆಗಾಗ್ಗೆ ಯುದ್ಧವಾಗುತ್ತಿದ್ದುದರಿಂದಲೂ ಜನರು ಸ್ವಲ್ಪ ಸ್ವಲ್ಪವಾಗಿ ಮಲೆನಾಡನ್ನು ಪ್ರವೇಶಿಸಿದರು. ಅಡಕೆ ಬೆಳೆಯು ಅವರಿಂದ ಅಲ್ಲಿ ಆರಂಭಿಸಲ್ಪಟ್ಟಿತು. ತೀರ್ಥಹಳ್ಳಿ, ಕೊಪ್ಪ, ಶೃಂಗೇರಿ ಮುಂತಾದ ಸ್ಥಳಗಳಲ್ಲಿ ಅಡಕೆ ಬೆಳೆಯನ್ನು ನಿರೂಪಿಸುವ ಶಿಲಾಶಾಸನಗಳು ಕ್ರಿ. ಶ. ೧೨೯೪ಕ್ಕೆ ಮುಂಚೆ ಕಂಡುಬರುವುದಿಲ್ಲ. ಪ್ರಾಕೃತಿಕ ಸೌಲಭ್ಯ ಹೆಚ್ಚಾಗಿದ್ದ ಈ ಪ್ರದೇಶವಲ್ಲಿ ಈ ಬೆಳೆಯು ಬಹಳ ಬೇಗ ಹರಡಿ ಅಲ್ಲಿನ ಮುಖ್ಯ ಬೆಳೆಯಾಗಿ ನಿಲ್ಲಲು ಅನುಕೂಲವಾಯಿತು. ಮುಂದೆ ಮೈದಾನದಲ್ಲೂ ಮಲೆನಾಡಿನಲ್ಲೂ ಅಡಕೆ ಬೆಳೆ ಹರಡಲು ಇದು ಕೇಂದ್ರವಾಯಿತು.

ಮೈಸೂರು ಜಿಲ್ಲೆಯ ಚಾಮರಾಜನಗರ ತಾಲ್ಲೂಕಿನಲ್ಲಿನ ಅಡಕೆ ತೋಟಗಳು ಸೊರಬದಿಂದ ಹರಡಿದವಲ್ಲವೆಂದೂ ಅದು ನಮಗೆ ಚೋಳ ರಾಜ್ಯದ ಕಾಣಿಕೆಯೆಂದೂ ಕಂಡುಬರುತ್ತದೆ. ಚೋಳರನ್ನು ಕ್ರಿ. ಶ. ೬೦೦ರಲ್ಲಿ ಸೋಲಿಸಿದ ಪಲ್ಲವರ ದೊರೆ ಸಿಂಹವಿಷ್ಣುವು "ಕಾವೇರನ ಮಗಳಿಂದ ಅನುಗ್ರಹಿಸಲ್ಪಟ್ಟ (ಕಾವೇರಿ ನದಿ) ಎಲ್ಲೆಲ್ಲೂ ಪಸರಿಸಿದ ಬತ್ತದ ಗದ್ದೆಗಳಿಂದಲೂ, ಅಡಕೆ ಕಾಡುಗಳಿಂದಲೂ ಆವೃತವಾದ ಚೋಳರಾಜ್ಯವನ್ನು" ಗೆದ್ದನೆಂದು ವಿವರಿಸಿದೆ. ಆದ್ದರಿಂದ ಚೋಳರಾಜ್ಯದಲ್ಲಿ ಕ್ರಿ. ಶ. ೬೦೦ಕ್ಕೆ ಮುಂಚೆಯೇ ಅಡಕೆ ಬೆಳೆ ಇದ್ದುದಾಗಿ ಕಂಡುಬರುತ್ತದೆ. ಇದು ಬಹುಶಃ ಕೊಯಮುತ್ತೂರು ಜಿಲ್ಲೆಯ ಮೇಟುಪಾಳಯಂ ಸ್ಥಳದಲ್ಲಿದ್ದಿರಬೇಕೆಂದೂ ಈಗ ಅಲ್ಲಿ ಹೆಚ್ಚಾ

ಗಿರುವ ತೋಟಗಳಿಂದ ಊಹಿಸಬಹುದು. ಮುಂದೆ ರಾಜೇಂ
ಚೋಳನು ಪ್ರಬಲನಾಗಿ ಗಂಗರನ್ನು ಗೆದ್ದು, ಗೆದ್ದ ಮೈಸೂ
ಸೀಮೆಯಲ್ಲಿನ ಚಾಮರಾಜನಗರದ ಆಲೂರನ್ನು ರಾಜಧಾ
ಯಾಗಿಟ್ಟು ಆಳಿದನು. ಆ ಸಮಯದಲ್ಲೇ ನೀಲಗಿರಿ ಬೆಟ್ಟ
ಒಂದು ಬದಿಗೇ ಇದ್ದ ಅಡಕೆ ಬೆಳೆ ಸುವರ್ಣಮಯ ಸುವರ್ಣಾ
ವತಿ ಬಯಲಿನ ಇನ್ನೊಂದು ಬದಿಗೂ ಹರಡಿರಬೇಕೆಂದ
ಕಾಣುತ್ತದೆ.

ಹೊಯ್ಸಳ ರಾಜ್ಯದ ಒಡಕಿನಿಂದುಂಟಾದ ಅಂತರ್ಯುದ
ಗಳಿಂದಲೂ, ಮಲ್ಲಿಕಾಫರನ ದಂಡಯಾತ್ರೆಯ ಫಲವಾಗಿಯ
ಅನೇಕ ಕೆರೆಗಳು ಒಡೆದು, ತೋಟಗಳು ನಾಶಮಾಡಲ್ಪಟ್ಟವ
ಇದರಿಂದ ಸುಮಾರು ೧೪ ನೇ ಶತಮಾನದವೇಳೆಗೆ ತೋಟಗಳ
ಬಹಳ ಕಡಮೆಯಾದವು. ವಿಜಯನಗರದ ಕಾಲದ
ರಾಜಧಾನಿಯ ಸುತ್ತಮುತ್ತಲೂ ಮತ್ತು ಅವರ ಆಶ್ರಿತರಾ
ಮಹಾನಾಡು ಪ್ರಭುಗಳೆನಿಸಿದ ೭ ಜನ ಸಹೋದರರಿಂದಲ
ಅಡಕೆ ಬೆಳೆ ಅಲ್ಲಲ್ಲಿ ಹೆಚ್ಚಾಗಿ ವಿಸ್ತರಿಸುವ ಏರ್ಪಾಡಾಗಿದ್ದರೂ
ಬಿಜಾಪುರದ ಸುಲ್ತಾನರ ಸೈನ್ಯದ ಹಾವಳಿಯಿಂದ ಅವು ಪುನ
ನಾಶವಾದವು. ಮುಂದೆ ಮರಾಠರಿಗೂ, ಹೈದರಾಲಿಗೂ ನಡೆ
ಯುದ್ಧಗಳು ನಾಶದಾಯಕವಾಗಿದ್ದು ಕೊಳ್ಳೆ, ಸೂರೆಗೆ ಪ್ರಧಾ
ವಾದವು. ಟೀಪುಸುಲ್ತಾನನು ಇದೇ ನಾಶದಾಯಕ ಮಾಗ
ವನ್ನು ಅವಲಂಬಿಸಿ, ಸೋಲುವ ಸಂಭವ ಕಂಡುಬಂದಲ್ಲಿ ಶತ್ರು
ಗಳಿಗೆ ಅನುಕೂಲವಾಗದಂತೆ ಅನೇಕ ಕೆರೆಗಳನ್ನು ಒಡೆದು
ತೋಟಗಳನ್ನು ಕಡಿದು, ಕಾಡು ಹೊಲಗಳನ್ನು ಸುಟ್ಟು—ತೋಟ
ಗಳ ಅವನತಿಗೆ ಕಾರಣನಾದನು. ಕ್ರಿ. ಶ. ೧೮೦೦ರಲ್ಲಿ ಅಂದ
ಟೀಪುವಿನ ನಂತರವೂ, ಬೆಂಗಳೂರು, ತುಮಕೂರು, ಮೈಸೂರ

ಜಿಲ್ಲೆಗಳಲ್ಲೂ ಮಲೆನಾಡಿನಲ್ಲೂ ಹೆಚ್ಚಿನ ಅಡಿಕೆ ತೋಟಗಳಿದ್ದು ದಾಗಿ ಸರ್ ಫ್ರಾನ್ಸಿಸ್ ಬುಕಾನನ್ ಎಂಬುವರು ವರದಿ ಮಾಡಿರುತ್ತಾರೆ. ೧೯ನೇ ಶತಮಾನದಲ್ಲಿ ಆಗಾಗ್ಗೆ ಉಂಟಾದ ಕ್ಷಾಮಪರಿಸ್ಥಿತಿ, ಮೊದಲೇ ಕೆರೆಗಳ ಆಶ್ರಯವಿಲ್ಲದ ತೋಟ ಗಳನ್ನು ಪೂರ್ಣ ನಾಶಮಾಡಿದವು. ಅಲ್ಲದೆ ಬೆಲೆಯೂ ಬಹಳ ಕಡಿಮೆಯಾಗಿ ಪ್ರೋತ್ಸಾಹವಿಲ್ಲದೆ, ಅದಕ್ಕೆ ಉತ್ತೇಜನ ಕಡಿಮೆ ಯಾಗಿ ತೋಟಗಳು ಹಾಳಾದುವು. ರೋಗ ರುಜಿನಾದಿಗಳು ಹೆಚ್ಚಿದುವು. ಮೈದಾನದಲ್ಲಿ ತೋಟಗಳನ್ನು ತೆಗೆದು ಹೊಲ ಗಳನ್ನಾಗಿ ಪರಿವರ್ತಿಸಿದ ಉದಾಹರಣೆಗಳು ಬಹಳ ಇವೆ. ಹೀಗಾಗಿ ಸುಮಾರು ಕ್ರಿ.ಶ. ೧೯೩೦ರ ವೇಳೆಗೆ ತೋಟಗಳು ಹಾಳಾಗಿ ಅಡಕೆಗೆ ಬೆಲೆ ತೀರ ಕಡಿಮೆಯಾಗಿ, ಅದರಲ್ಲಿ ರೈತರಿಗೆ ಹೆಚ್ಚಿನ ಆಸಕ್ತಿ ಇಲ್ಲದಂತಾಗಿತ್ತು. ಅಡಕೆ ಆಮದಿಗಾಗಿ ಹೆಚ್ಚಿನ ಹಣ ಪೋಲಾಗುವುದನ್ನು ತಪ್ಪಿಸಿ, ಅಡಕೆ ಬೆಳೆ ಹೆಚ್ಚಿಸಲು ಕೇಂದ್ರ ಸರ್ಕಾರವು, ಭಾರತ ಕೇಂದ್ರ ಅಡಕೆ ಸಮಿತಿ ಯೊಂದನ್ನು ರಚಿಸಿ, ಆಮದನ್ನು ಬಹುಮಟ್ಟಿಗೆ ನಿಲ್ಲಿಸಿದ್ದರಿಂದ, ಅಡಕೆ ಬೆಲೆ ಏರಿ ರೈತರಿಗೆ ಸ್ಫೂರ್ತಿ ದೊರೆತಂತಾಗಿದೆ. ಕೇಂದ್ರ ಅಡಕೆ ಸಮಿತಿಯವರು ಅಲ್ಲಲ್ಲಿ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಿ, ಅಡಕೆ ಬೇಸಾಯದ ಸರಿಯಾದ ಕ್ರಮಗಳನ್ನೂ, ಅದಕ್ಕೆ ಒದಗಿಸಬೇಕಾದ ಗೊಬ್ಬರಗಳ ಪ್ರಮಾಣವನ್ನೂ, ರೋಗ ರುಜಿನಾದಿಗಳನ್ನು ತಡೆಗಟ್ಟುವ ಕ್ರಮಗಳನ್ನೂ ರೈತರಿಗೆ ತಿಳಿಸುತ್ತಿರುವುದಲ್ಲದೆ, ಅದರ ಬೆಳೆಗೆ ಸರಿಯಾದ ಬೆಲೆ ಸಿಗುವಂತೆ ಅಲ್ಲಲ್ಲಿ ಮಾರಾಟ ಸಂಘಗಳ ಏರ್ಪಾಟನ್ನೂ ಮಾಡಿರುತ್ತಾರೆ. ಇದರಿಂದ ರೈತರಲ್ಲಿ ಉತ್ಸಾಹ ಮೂಡಿ ಅಡಕೆ ಬೆಳೆ ಹೆಚ್ಚಲು ಅನುಕೂಲವಾಗಿದೆ. ಈಗಿರುವ ಹುರುಪಿನಲ್ಲೇ

ಮುಂದುವರಿದಲ್ಲಿ ಶೀಘ್ರದಲ್ಲಿಯೇ ಅಡಕೆಗೆ ಚಾಳು
ಹೊಯ್ಸಳರ ಕಾಲದಲ್ಲಿದ್ದಂಥ ಪ್ರಾಮುಖ್ಯತೆ ಬರುವುದ
ಸಂಶಯವಿಲ್ಲ.

೨

**ಪರಿಚಯ :** ಅಡಕೆಯನ್ನು ಕ್ರಿಸ್ತ ಪೂರ್ವಕ್ಕೆ ಬಹಳ ಹಿಂ
ನಿಂದಲೂ ನಮ್ಮ ದೇಶದಲ್ಲಿ ಬೆಳೆಯುತ್ತಿದ್ದರೆಂಬುದಕ್ಕೆ ಆಧ
ವಿದೆ. ಸಂಸ್ಕೃತದಲ್ಲಿ "ಕ್ರಮುಕ" ಎಂಬ ಇದರ ಹೆಸ
ಬಹಳ ಹಿಂದಿನಿಂದಲೂ ಕಂಡುಬರುತ್ತದೆ. ಋಗ್ವೇದದ
ಇದರ ವರ್ಣನೆಯಿದೆ. ಅಲ್ಲಿಂದೀಚೆಗೆ ಅನೇಕ ಕವಿತೆಗಳ
ಇದರ ಉಲ್ಲೇಖವಿದೆ. ಅಮರಕೋಶದಲ್ಲಿ ಇದಕ್ಕೆ ಕ್ರಮು
ಗೋಂಟಾ, ಪೂಗ, ಗುವಾಕ, ಉದ್ವೇಗ, ತೂದ, ಯೂ
ಬ್ರಾಹ್ಮಣ್ಯ ಮತ್ತು ಬ್ರಹ್ಮದಾರು ಎಂಬ ಹೆಸರುಗಳು ಇ
ವುದಾಗಿ ತಿಳಿದುಬರುತ್ತದೆ. ಇದರ ಕಾಂಡವು ಕಂಟಿಕೆಗಳಿ
ಕೂಡಿರುವುದಾಗಿ 'ಕ್ರಮುಕ'ವೆಂದೂ, ಅಡಕೆಯು ಬುಗ
ಯನ್ನು ಹೋಲುವುದರಿಂದ 'ಗೋಂಟಾ' ಎಂದೂ, ಯಾ
ಗಲೂ ಗುಂಪಾಗಿ ಬೆಳೆಯುವುದರಿಂದ 'ಪೂಗ'ವೆಂದೂ, ಯ
ಯಾಗಾದಿಗಳಲ್ಲಿ ಬಲಿಯನ್ನು ಕಟ್ಟುವ ಯೂಪಸ್ತಂಭಗಳ
ಇದನ್ನು ಉಪಯೋಗಿಸಲ್ಪಡುವುದರಿಂದ 'ತೂದ' ಅಥ
'ಯೂಪ'ವೆಂದೂ, ಅದರ ಉಪಯುಕ್ತ ಮರ ಮತ್ತು ಹಣ
ಗಳಿಂದಾಗಿ 'ಬ್ರಾಹ್ಮಣ್ಯ' ಅಥವಾ 'ಬ್ರಹ್ಮದಾರು' ಎಂದ
ಅಡಕೆಯ ಉಪಯೋಗವು ಭೇದಿಯುಂಟುಮಾಡುವುದರಿ
'ಗುವಾಕ'ವೆಂದೂ ಮತ್ತು ಬೆವರು, ಅಮಲು ಉತ್ಪ
ಮಾಡುವುದರಿಂದ 'ಉದ್ವೇಗ' ಎಂದೂ ಹೆಸರು ಬಂದಿರು
ದಾಗಿ ನಿರೂಪಿಸಲ್ಪಟ್ಟಿದೆ.

ಅಡಕೆ ಭಾರತದ ವೃಕ್ಷವಲ್ಲ. ಪರದೇಶದಿಂದ ನಮ್ಮ ದೇಶಕ್ಕೆ ಬಂದದ್ದು. ಅದರ ವಿಸ್ತರಣೆ ಪೂರ್ವ ಆಫ್ರಿಕಾ ಖಂಡದಿಂದ ಫಿಲಿಪೈನ್ ದ್ವೀಪಸ್ತೋಮಗಳವರೆಗೂ ಹಬ್ಬಿದ್ದರೂ ಅದರ ಅನೇಕ ಜಾತಿಗಳು ನೈಸರ್ಗಿಕವಾಗಿ ಬೆಳೆಯುವಂಥಾ ಫಿಲಿಪೈನ್ಸ್ ದ್ವೀಪಗಳೇ ಅದರ ತಾಯ್ನಾಡಾಗಿರಬೇಕೆಂದು ಊಹಿಸಲಾಗಿದೆ. ಸುಮಾರು ೩೬ ತರಹದ ಅಡಕೆ ವೃಕ್ಷಗಳು ಇವೆಯಾದರೂ, ಸಾಧಾರಣವಾಗಿ ತಿನ್ನಲು ಉಪಯೋಗವಾದದ್ದು ಒಂದೇ ಜಾತಿ. ಅದನ್ನೇ ಸಾಮಾನ್ಯವಾಗಿ ಎಲ್ಲೆಡೆ ಬೆಳೆಸುತ್ತಿರುವುದು. ಇದಕ್ಕೆ ಸಂಬಂಧಪಟ್ಟ 'ಭಗನಿ' ಅಥವಾ 'ರಾಮು' ಅಡಕೆ ಎಂಬ ಜಾತಿಯ ಮರವು ಅಲ್ಲಲ್ಲಿ ಬೆಳೆಯುತ್ತವಾದರೂ ಅವು ಅಷ್ಟೇನೂ ಉಪಯುಕ್ತವಲ್ಲ.

ಮೈಸೂರು ಸಂಸ್ಥಾನದ ಅಡಕೆ ಬೆಳೆಯ ವಿಸ್ತೀರ್ಣ ಮತ್ತು ಉತ್ಪತ್ತಿ ಈ ಮುಂದೆ ಕೊಟ್ಟಿರುವ ಪಟ್ಟಿಯಂತೆ ಇದೆ:

| ಜಿಲ್ಲೆ | ವಿಸ್ತೀರ್ಣ (ಎಕರೆಗಳಲ್ಲಿ) | ಉತ್ಪತ್ತಿ (ಬಂಗಾಲೀ ಮಣಗಳಲ್ಲಿ) | ಸರಾಸರಿ ಎಕರೆಗೆ |
|---|---|---|---|
| ೧. ಶಿವಮೊಗ್ಗ | ೧೬,೨೪೦ | ೧,೫೨,೮೧೮ | |
| ೨. ಚಿಕ್ಕಮಗಳೂರು | ೧೩,೭೬೫ | ೧,೨೯,೩೯೧ | |
| ೩. ದಕ್ಷಿಣ ಕನ್ನಡ | ೧೬,೬೦೦ | ೧,೫೬,೩೭೨ | |
| ೪. ಉತ್ತರ ಕನ್ನಡ | ೧೦,೮೪೨ | ೧,೦೧,೯೧೫ | ೯.೪ |
| ೫. ಚಿತ್ರದುರ್ಗ | ೪,೯೫೯ | ೪೬,೬೧೫ | ಬಂಗಾಲೀ |
| ೬. ತುಮಕೂರು | ೬,೧೩೫ | ೫೭,೬೬೯ | ಮಣ. |
| ೭. ಹಾಸನ | ೩,೨೧೨ | ೩೦,೧೯೩ | |
| ೮. ಮೈಸೂರು | ೧,೭೭೨ | ೧೬,೬೫೭ | |
| ೯. ಮಂಡ್ಯ | ೭೯೯ | ೭,೫೧೧ | |

| ಜಿಲ್ಲೆ | ವಿಸ್ತೀರ್ಣ (ಎಕರೆಗಳಲ್ಲಿ) | ಉತ್ಪತ್ತಿ (ಬಂಗಾಲೀ ಮಣಗಳಲ್ಲಿ) | ಸರಾಸರ ಎಕರೆಗ |
|---|---|---|---|
| ೧೦. ಧಾರವಾಡ | ೨೧೨ | ೧,೯೯೩ | |
| ೧೧. ಬೆಂಗಳೂರು | ೯೫೪ | ೮,೯೬೮ | |
| ೧೨. ಕೋಲಾರ | ೧೮೪ | ೧,೭೩೦ | |
| ೧೩. ಕೊಡಗು | ೬೨೬ | ೫,೮೮೪ | |

ವೈಸೂರಿನ ಅಡಕೆ ಬೆಳೆಯ ಪ್ರದೇಶಗಳನ್ನು ನಾಲ್ಕು ಪಂಗ ಗಳಾಗಿ ವಿಂಗಡಿಸಬಹುದು :

೧. **ತೀರಪ್ರದೇಶ :** ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನ ಜಿಲ್ಲೆಯ ಕೆಲವು ಭಾಗಗಳು, ಕೊಡಗಿನ ಕೆಲವು ಭಾಗ, ಮೆಕ್ಕಲ ಮತ್ತು ಜಂಬಿಟ್ಟಿಗೆ ಮಣ್ಣಿನಿಂದ ಕೂಡಿದ್ದು ೧೦೦ ಅಂಗುಲಕ್ ಹೆಚ್ಚಿನ ಮಳೆಯಾಗುವ ಪ್ರದೇಶ. ಬೇಸಿಗೆಯಲ್ಲಿ ನೀರು ಕಟ್ಟು ವಾಡಿಕೆ ಇದೆ. ಅಡಕೆ ದಪ್ಪವಾಗಿದ್ದು ಶೇಕಡಾ ೮೦ ಭಾಗ ಇಳುವರಿ ಚಾಲಿ ಅಥವಾ "ಬಿಳಿಗೋಟಾಗಿ" ಉತ್ಪಾದಿಸುವರು

೨. **ಮಲೆನಾಡು ಪ್ರದೇಶ:** ಶಿವಮೊಗ್ಗ, ಹಾಸನ, ಚಿ ಮಗಳೂರು, ಕೊಡಗು ಜಿಲ್ಲೆಗಳ ಹೆಚ್ಚಿನ ಮಳೆಯಾಗು ಪ್ರದೇಶಗಳು. ಹೆಚ್ಚು ಕಾಡುಗಳಿಂದ ತುಂಬಿರುವ ಜಂಬಿಟ್ಟ ಪ್ರದೇಶ. ೮೦ ಅಂಗುಲಕ್ಕೆ ಹೆಚ್ಚಾದ ಮಳೆ ಬೀಳುತ್ತದೆ ಅಡಕೆ ಸಣ್ಣದಾಗಿದ್ದು ಕಾಯಡಿಕೆ ಕೊಯ್ದು ಬೇಯಿಸಿ ಮಾ ಕಟ್ಟಿಗನುಗುಣವಾಗಿ ತಯಾರಾಗುತ್ತದೆ.

೩. **ಉತ್ತರ ಮಲೆನಾಡು ಪ್ರದೇಶ:** ಉತ್ತರ ಕನ್ನ ಜಿಲ್ಲೆಯ ಸಿರಸಿ, ಸಿದ್ದಾಪುರ ತಾಲ್ಲೂಕು. ಮಲೆನಾಡಿನಂ ಎಲ್ಲಾ ವಿಧದಲ್ಲೂ ಹೋಲುತ್ತಿದ್ದರೂ ಅಲ್ಲಿಗಿಂತ ಹೆಚ್ಚಿ ಉಪಬೆಳೆಗಳನ್ನು ಬೆಳೆಯುವ ವಾಡಿಕೆ ಇದೆ.

೪. **ಮೈದಾನ ಪ್ರದೇಶ :** ಕಮ್ಮಿ ಮಳೆಯಾಗುವ ಉಳಿದ ಎಲ್ಲಾ ಪ್ರದೇಶಗಳು. ೬೦ ಅಂಗುಲಕ್ಕಿಂತ ಕಮ್ಮಿ ಮಳೆಯಾಗುವ ಪ್ರದೇಶಗಳು. ಮಣ್ಣು ಒಳ್ಳೇ ಮೆಕ್ಕಲಿನಿಂದ, ಬರೀ ಮರಳುಭೂಮಿಯವರೆಗೂ ಅಂತರ ಹೊಂದಿದೆ. ಆದ್ದರಿಂದ ಅದರ ವ್ಯವಸಾಯ ನೀರನ್ನನುಸರಿಸಿ ಕೆರೆ ಕಟ್ಟೆಗಳ ಕೆಳಗೆ ಮಾತ್ರ ಕಾಣುತ್ತದೆ. ಕಾಯಿ ಮಧ್ಯ ಗಾತ್ರವಾಗಿದ್ದು, ಹೆಚ್ಚಾಗಿ ಕಾಯಿ ಕೊಯ್ದು ಬೇಯಿಸಿದ ಅಡಕೆಯು ತಯಾರಾಗುತ್ತದೆ.

**ಮಳೆ ಮತ್ತು ಮಣ್ಣಿನ ವೈವಿಧತ್ಯೆ :** ೮೦ ಅಂಗುಲಕ್ಕಿಂತ ಹೆಚ್ಚು ಮಳೆಯಾಗುವ ಜಂಬಿಟ್ಟಿಗೆ ಮಣ್ಣಿನ ಮಲೆನಾಡಿನಿಂದ, ೨೦ ಅಂಗುಲಕ್ಕೂ ಕಮ್ಮಿ ಮಳೆಯು ಮರಳು ಮಿಶ್ರಿತ ಕೆಂಪು ಭೂಮಿಯ ಮೈದಾನದವರೆಗಿನ ವಿವಿಧ ಪ್ರದೇಶಗಳಲ್ಲಿ ಅಡಕೆ ಬೆಳೆಯಾಗುತ್ತದೆ. ಸಾಧಾರಣವಾಗಿ ೬೦ ಅಂಗುಲಕ್ಕಿಂತ ಕಮ್ಮಿ ಮಳೆಯಾಗುವ ಪ್ರದೇಶಗಳಲ್ಲಿ ಅದಕ್ಕೆ ಬೇಕಾದಾಗ ನೀರು ಹಾಯಿಸುವ ಏರ್ಪಾಡಿರಬೇಕು. ಬೇಸಿಗೆಯಲ್ಲಂತೂ ಇದು ಅತ್ಯಗತ್ಯ. ಸಮುದ್ರಮಟ್ಟದಿಂದ ೨೫೦ ಅಡಿಯಿಂದ ೩೦೦೦ ಅಡಿ ಎತ್ತರದವರೆಗಿನ ಪ್ರದೇಶಗಳಲ್ಲಿ ಅಡಕೆ ಚೆನ್ನಾಗಿ ಬೆಳೆಯುವುದು ಕಂಡುಬಂದಿದೆ. ಆದ್ದರಿಂದ ಅಡಕೆ ಬೆಳೆಗೆ ಮುಖ್ಯವಾಗಿ ಬೇಕಾದದ್ದು ಫಲವತ್ತಾದ ಜೌಗಿಲ್ಲದ ಭೂಮಿ ಮತ್ತು ಸಾಕಾದಷ್ಟು ನೀರಿನ ಸೌಕರ್ಯ. ಜೊತೆಗೆ ಸ್ವಲ್ಪ ನೆರಳೂ ಇದ್ದಲ್ಲಿ ಅದು ಬೇಗನೆ ಬೆಳೆಯಲು ಸಹಕಾರಿಯಾಗುತ್ತದೆ.

ಮುಂಗಾರು ಹಿಂಗಾರು ಮಳೆಗಳೆರಡು ಅನುಕೂಲವಾದರೂ ಸುಮಾರು ನವಂಬರ್ ತಿಂಗಳಿಂದ ಏಪ್ರಿಲ್, ಮೇ ತಿಂಗಳ ವರೆಗಿನ ಚಳಿ ಮತ್ತು ಬೇಸಿಗೆ ಕಾಲಗಳಲ್ಲಿ ಮಳೆಯೇ ಇರು

ವುದಿಲ್ಲ. ಮೇಲ್ಕಂಡ ಲಕ್ಷಣಗಳಿಗನುಗುಣವಾಗಿ ಮಳೆಗಾಲದಲ್ಲಿ ವ್ಯತ್ಯಾಸವಿದ್ದು ಕೆಲವು ಕಡೆ ಮುಂಗಾರೂ, ಕೆಲವು ಕ ಹಿಂಗಾರೂ ಪ್ರಬಲವಾಗಿರುತ್ತವೆ. ತೀರಪ್ರದೇಶಗಳಲ್ಲೂ ಪಶ್ಚಿಮ ಕರಾವಳಿಯಲ್ಲೂ ಅಂದರೆ ಮುಖ್ಯವಾಗಿ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳು, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಕೊಡಗು ಈ ಜಿಲ್ಲೆಗಳ ಬಹು ಭಾಗದಲ್ಲಿ ೬೦ ಅಂಗುಲ ದಿಂದ ೩೦೦ ಅಂಗುಲಗಳವರೆಗಿನ ಮಳೆಯಾಗುವುದುಂಟು. ಅಲ್ಲಿಂದ ಪೂರ್ವಕ್ಕೆ ಹೋದಂತೆಲ್ಲಾ ಮಳೆ ಕಡಿಮೆಯಾ ಮೈದಾನ ಪ್ರದೇಶದ ಕೆಲಭಾಗಗಳಲ್ಲಿ ೧೫ ಅಂಗುಲಕ್ಕೂ ಕಡಿಮೆ ಮಳೆಯಾಗುತ್ತದೆ. ಇಂತಹ ಪ್ರದೇಶದಲ್ಲೂ ಕೆರೆಗಳ ಮತ್ತು ಭಾವಿಗಳ ಸಹಾಯದಿಂದ ಅಡಕೆ ಬೆಳೆಯಾಗುತ್ತಿದೆ.

ಮೈಸೂರು ರಾಜ್ಯದ ಮಣ್ಣುಗಳನ್ನು ಐದು ಪಂಗಡಗಳಾ ವಿಂಗಡಿಸಬಹುದು :

೧. ಜಂಬಿಟ್ಟಿಗೆ ಮಣ್ಣು.
೨. ಕೆಂಪು ಮಣ್ಣು.
೩. ಕಪ್ಪು ಮಣ್ಣು.
೪. ಮರಳು ಮಿಶ್ರಿತ ಕೆಂಪು ಮಣ್ಣು.
೫. ತೀರಪ್ರದೇಶದ ಮೆಕ್ಕಲು ಮಣ್ಣು.

ಇವುಗಳಲ್ಲಿ ೧, ೨ ಮತ್ತು ೪ ನೇ ವಿಧದ ಭೂಮಿಗಳಲ್ಲಿ ಹೆಚ್ಚಾಗಿ ಅಡಕೆ ಬೆಳೆಯಾಗುತ್ತಿದೆ. ಇತರ ಭೂಮಿಗಳಲ್ಲಿ ತೀ ಕಡಿಮೆ.

ಜಂಬಿಟ್ಟಿಗೆ ಭೂಮಿಯು ಹೆಚ್ಚು ಮಳೆಯಾಗುವ ಪಶ್ಚಿಮ ಘಟ್ಟದ ಉದ್ದಕ್ಕೂ ಕಂಡುಬರುತ್ತದೆ. ಬೆಳಗಾಂ, ಧಾರವಾಡ ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳ ಕೆಲಭಾಗಗಳೂ, ಚಿಕ್ಕ

ಮಗಳೂರು, ಹಾಸನ, ದಕ್ಷಿಣ ಕನ್ನಡ ಮತ್ತು ಕೊಡಗಿನ ಬಹು ಭಾಗಗಳೂ ಈ ತರಹದ ಮಣ್ಣಿನಿಂದ ಕೂಡಿವೆ. ಇವು ಕೆಂಪು ಅಥವಾ ಹಳದಿ ಬಣ್ಣದವಾಗಿದ್ದು, ಹೊಸದಾಗಿ ಅಗೆದಾಗ ಮೆತ್ತಗಿದ್ದು, ಬೇಗನೆ ಒಣಗಿ ಕಲ್ಲಿನಂತೆ ಗಟ್ಟಿಯಾಗುತ್ತವೆ. ತೇವದಲ್ಲಿ ಇದರ ಸಾಗುವಳಿ ಬಹು ಸುಲಭ ಮತ್ತು ನೀರು ಇದರಿಂದ ಸುಲಭವಾಗಿ ಬಸಿದುಹೋಗುತ್ತದೆ.

ಕೆಂಪು ಮಣ್ಣು ನಮ್ಮ ರಾಜ್ಯದ ಬಹು ಭಾಗಗಳಲ್ಲಿ ಕಂಡು ಬರುತ್ತದೆ. ಕೋಲಾರ, ಬೆಂಗಳೂರು, ತುಮಕೂರು, ಮಂಡ್ಯ, ಮೈಸೂರಿನ ಎಲ್ಲೆಡೆಯೂ ಮತ್ತು ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ, ಧಾರವಾಡ, ಬಳ್ಳಾರಿ ಜಿಲ್ಲೆಗಳ ಕೆಲಭಾಗಗಳೂ ಈ ಮಣ್ಣಿನಿಂದ ಕೂಡಿವೆ. ಇದು ಕೆಂಪು ಅಥವಾ ಹಳದಿ ಮಿಶ್ರಿತ ಕೆಂಪು ಬಣ್ಣವಾಗಿದ್ದು, ಮರಳು ಅಥವಾ ಜೇಡಿಮಣ್ಣಿನ ವಿವಿಧ ಅಂಶಗಳಿಂದ ಕೂಡಿರುತ್ತವೆ. ನೀರು ಬಹು ಬೇಗ ಈ ಮಣ್ಣಿನಲ್ಲಿ ಇಂಗಿಹೋಗುವುದರಿಂದ ಹೆಚ್ಚು ನೀರಿನ ಅಗತ್ಯವಿದೆ.

ಮರಳು ಮಿಶ್ರಿತ ಕೆಂಪು ಭೂಮಿಯು ಸಂಸ್ಥಾನದ ನೈರುತ್ಯ ಭಾಗಗಳಲ್ಲಿ ಕಂಡುಬರುತ್ತದೆ. ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳ ಕೆಲಭಾಗಗಳು ಈ ತರಹದ ಮಣ್ಣಿನಿಂದ ಕೂಡಿವೆ. ಹೆಚ್ಚಿನ ಮರಳು ಅಥವಾ ಕಲ್ಲು ಮಿಶ್ರಣ ಕಂಡುಬಂದು ಕೆಲವೆಡೆ ಸಣ್ಣ ಕಲ್ಲುಗಳೂ ಇರುತ್ತವೆ.

ಈ ಮೂರು ಮುಖ್ಯ ಬಗೆಯ ಭೂಮಿಗಳಲ್ಲೂ ಅಡಕೆ ಬೆಳೆ ಚೆನ್ನಾಗಿ ಬೆಳೆಯಬಹುದು.

**ಸಸ್ಯಲಕ್ಷಣ ವಿವರಣೆ:** ಅಡಕೆ (ಅರೇಕಾ ಕೇಟಚು, ಲಿನ್) ತೆಂಗು, ಭಗನಿ ಮೊದಲಾದ ಏಕಕಾಂಡ ವೃಕ್ಷಗಳ ಗುಂಪಿಗೆ

ಸೇರಿದ್ದು, ಅವುಗಳಂತೆ ಉದ್ದವಾಗಿ ಬೆಳೆಯುತ್ತದೆ. ಅದ ಕೊಂಬೆಗಳಿಲ್ಲದ ಏಕಕಾಂಡವು ಸ್ತಂಭಾಕೃತಿಯಾಗಿಯೂ ನುಣುಪಾಗಿಯೂ, ಬೂದು ಬಣ್ಣವುಳ್ಳದ್ದಾಗಿಯೂ, ಉದ್ದಕ್ಕೂ ಬಿದ್ದ ಎಲೆಗಳ, ಕಂಟಿಂಕೆಗಳ ಗುರುತುಳ್ಳದ್ದಾಗಿಯೂ ಆಗಿರು ತ್ತದೆ. ಮರವು ಸಾಧಾರಣವಾಗಿ ೬೦–೭೦ ಅಡಿಗಳವರೆ ಬೆಳೆದು, ೬೦–೮೦ ವರ್ಷಗಳವರೆಗೂ ಬದುಕಿರುತ್ತದೆ. ಅವುಗ ಗಾತ್ರ ಮತ್ತು ಎತ್ತರವು ಮಣ್ಣಿನ ಗುಣ ಮತ್ತು ಹವಾಮಾನ ಮರಗಳ ಸಾಂದ್ರತೆ ಇವುಗಳನ್ನು ಹೊಂದಿಕೊಂಡಿವೆ. ಕಾಂಡವ ಬುಡದಲ್ಲಿ ದಪ್ಪವಾಗಿದ್ದು ಬೆಳೆದಂತೆಲ್ಲಾ ಕ್ರಮೇಣ ಸಣ್ಣ ವಾಗುತ್ತಾ ಹೋಗುತ್ತದೆ. ಇದರ ಬೆಳವಣಿಗೆಯೆಲ್ಲಾ ತುದಿ ಯಲ್ಲಿರುವ ಒಂದೇ ಸುಳಿಯನ್ನು ಅನುಸರಿಸಿರುವುದರಿಂದ ಇದಕ್ಕಾಗಲೀ, ಕಾಂಡದ ಇತರ ಭಾಗಕ್ಕಾಗಲೀ ಆದ ಗಾಯ ಮಾಯದೇ ಹಾಗೆಯೇ ಉಳಿಯುತ್ತದೆ. ಎಲೆಗಳ ಬುಡವ ಕಾಂಡವನ್ನು ಪೂರ್ತಿಯಾಗಿ ಸುತ್ತು ಕಟ್ಟಿದ್ದು, ಹಳೆಯದಾಗಿ ಬೀಳುವಾಗ ಅದರಮೇಲೆ ವರ್ತುಲಾಕಾರದ ಕಂಟಿಂಕೆಯ ಗುರುತನ್ನು ಮಾಡುತ್ತದೆ. ಸಾಧಾರಣವಾಗಿ ವರ್ಷಕ್ಕೆ ೮–೯ ಎಲೆಗಳು ಉತ್ಪನ್ನವಾದರೂ ೫–೬ ಎಲೆಗಳು ಮಾತ್ರ ಉದುರು ತ್ತವೆ. ಆದ್ದರಿಂದ ಈ ಗುರುತುಗಳ ಎಣಿಕೆಯಿಂದ ಮರದ ವಯಸ್ಸನ್ನು ನಿರ್ಧರಿಸಲು ಸಾಧ್ಯವಿದೆ.

ಕಾಂಡದ ತುದಿಯು ಬೇರೆ ಬೇರೆ ವಯಸ್ಸಿನ ಎಲೆಗಳಿಂದ ಕೂಡಿರುತ್ತದೆ. ಎಳೇ ಸಸಿಗಳಲ್ಲಿ ೪ರಿಂದ ೬ರ ವರೆಗೆ ಎಲೆ ಗಳಿದ್ದು ಗಿಡ ಬೆಳೆದಂತೆಲ್ಲಾ ಅವುಗಳ ಸಂಖ್ಯೆ ಹೆಚ್ಚುತ್ತದೆ. ಬಲಿತು ಫಲ ಕೊಡುವ ಮರಗಳಲ್ಲಿ ೭ರಿಂದ ೧೨ ಎಲೆಗಳು ಇರುತ್ತವೆ. ಇವು ಕಾಂಡದಮೇಲೆ ೫ ಸಾಲುಗಳಾಗಿ

ಏರ್ಪಟ್ಟವೆಯೆಂದು ಕಂಡುಬರುತ್ತದೆ. ಎಲೆ ಸುಳಿಯಿಂದ ಹಳೆಯದಾಗಿ ಬೀಳುವವರೆಗೆ ಸುಮಾರು ಎರಡು ವರ್ಷಗಳ ಅವಧಿ ಬೇಕಾಗುತ್ತದೆ. ಗರಿಗಳು ಉದ್ದವಾಗಿದ್ದು ಇಕ್ಕಡೆ ಗಳಲ್ಲಿಯೂ ನುಣುಪಾದ ಪತ್ರವೃಂತದಿಂದ ಕೂಡಿರುತ್ತದೆ.

ಮರಗಳು ಏಕಗೃಹೀಯ ಸಸ್ಯವರ್ಗದವುಗಳು. ಗಂಡು ಮತ್ತು ಹೆಣ್ಣು ಹೂಗಳು ಒಂದೇ ಸಿಂಗಾರದಲ್ಲಿ ಕಂಡು ಬರುತ್ತವೆ. ಸಿಂಗಾರವು ದೋಣಿಯಾಕಾರದ ಹೊಂಬಾಳೆ ಯಿಂದ ಮುಚ್ಚಿದ್ದು, ಅರಳಿದಾಗ ಅದರ ನಡುದಿಂಡಿನ ಇಕ್ಕೆಡೆ ಗಳಲ್ಲೂ ಜೋಡಿಸಿರುವ ಉಪ ಎಗ್ಗೆಗಳ ಮೇಲೆ ಹೂವುಗಳು ಒತ್ತೊತ್ತಾಗಿ ಕಂಡುಬರುತ್ತವೆ. ತುದಿಯಲ್ಲಿ ಗಂಡು ಹೂವು ಗಳಿದ್ದು ಇವೇ ಮೊದಲು ಅರಳುತ್ತವೆ. ಹೆಣ್ಣು ಹೂವು ಸಿಂಗಾರದ ಬುಡದಲ್ಲಿದ್ದು ಕೊನೆಯಲ್ಲಿ ಅರಳುತ್ತದೆ.

ಕಾಯಿಗಳು ಪರಿಮಾಣ ಮತ್ತು ಆಕೃತಿಯಲ್ಲಿ ಬೇರೆ ಬೇರೆ ಯಾಗಿ ಉರುಟು, ಉದ್ದ ಮತ್ತು ಅಂಡಾಕೃತಿಯದಾಗಿರುತ್ತವೆ. ಕಾಯಿಗಳು ಎಳೆಯದಾಗಿರುವಾಗ ಹಸಿರು ಬಣ್ಣದ್ದಾಗಿದ್ದು, ಹಣ್ಣಾದಂತೆಲ್ಲಾ ಕಿತ್ತಳೆ ಹಳದಿ ಅಥವಾ ಕೇಸರಿ ಕೆಂಪು ಬಣ್ಣ ದ್ದಾಗುತ್ತವೆ. ಬೀಜದ ತಿರುಳು ನಸುಗೆಂಪಾಗಿದ್ದು ಮೇಲೆ ದಪ್ಪ ಸಿಪ್ಪೆಯಿಂದ ಮುಚ್ಚಿರುತ್ತದೆ. ಸಾಮಾನ್ಯವಾಗಿ ಗಿಡಕ್ಕೆ ೨–೩ ಗೊನೆಗಳಿದ್ದು, ಗೊನೆ ಒಂದರಲ್ಲಿ ೧೫೦ರಿಂದ ೩೦೦ ಕಾಯಿಗಳಿರುತ್ತವೆ.

**ಸಸಿ ಉತ್ಪನ್ನ :** ಯಾವೊಂದು ಬೆಳೆಯ ಪ್ರಗತಿಯೂ ಅದರ ಬೀಜವನ್ನು ಅವಲಂಬಿಸಿದೆ. ಅದರಲ್ಲೂ ಬಹುವಾರ್ಷಿಕ ಬೆಳೆಗಳ ವಿಚಾರದಲ್ಲಿ ಹೆಚ್ಚು ಗಮನವೀಯಬೇಕು. ಸಾಧಾರಣ ವಾಗಿ ಒಂದು ಪ್ರದೇಶದ ಅಡಕೆಯು ಇನ್ನೊಂದು ಪ್ರದೇಶದಲ್ಲಿ

ಬೆಳೆಯುತ್ತಾದರೂ ಆಯಾ ಪ್ರದೇಶಗಳ ಬೀಜವನ್ನೆ ಉಪಯೋಗಿಸುವುದು ಉತ್ತಮ. ತಾಯಿಮರದ ವಯಸ್ಸಿ ವಿಚಾರದಲ್ಲಿ ಬಹಳ ವೈವಿಧ್ಯತೆಯಿದೆ. ಮೈಸೂರಿನಲ್ಲಿ ಬಹ ಹಳೆಯ ಮರಗಳಲ್ಲೇ ಬೀಜ ಆರಿಸುತ್ತಾರೆ. ಕೇರಳದ ಕೆ ಭಾಗಗಳಲ್ಲಿ ಬಹಳ ಎಳೆಯ ಮರಗಳಿಂದ ಬೀಜ ತೆಗೆದುಕೊಳ ತ್ತಾರೆ. ಇವು ಸಾಂಪ್ರದಾಯಿಕವಾದುದಲ್ಲದೆ ಸಂಶೋಧನೆಯ ಆಧಾರದಿಂದಲ್ಲ. ಆದ್ದರಿಂದ ೩೫ ರಿಂದ ೪೫ ವರ್ಷ ವಯಸ್ಸಾ ಮಧ್ಯ ವಯಸ್ಸಿನ ಮರಗಳನ್ನೇ ಚುನಾಯಿಸುವುದು ಒಳಿತೆಂದ ಕಂಡುಬರುತ್ತದೆ. ಆಯಾ ಪ್ರದೇಶದಲ್ಲಿ ಇಳುವರಿಗೆ ಹೆಸರಾಂ ತೋಟಗಳಲ್ಲಿ ಒಳ್ಳೆಯ ದೃಢಕಾಯುವಾಗಿ, ರೋಗರಹಿತವಾಗಿ ಹೆಚ್ಚು ಇಳುವರಿಕೊಡುವ ಮಧ್ಯ ವಯಸ್ಸಿನ ಮರಗಳನ್ನು ಗುರುತಿಸಬೇಕು. ಅವುಗಳ ಕಾಯಿಗಳು ದೊಡ್ಡದಾದ ಅಡ ಮತ್ತು ತೆಳುವಾದ ಸಿಪ್ಪೆಯಿಂದ ಕೂಡಿರಬೇಕು. ಸಾಧ್ಯವಾದಲ್ಲಿ ೨–೩ ವರ್ಷ ಅದರ ಇಳುವರಿಯನ್ನು ಪರೀಕ್ಷಿಸುವುದು ಉತ್ತಮ. ಅಂತಹ ಚುನಾಯಿಸಿದ ಮರದಲ್ಲಿ ಮಧ್ಯದ ಗೊನೆಗಳನ್ನು ಮಾತ್ರ ಬೀಜಕ್ಕೆ ಉಪಯೋಗಿಸಬೇಕು. ಮೊದಲು ಮತ್ತು ಕೊನೆಯ ಗೊನೆಗಳಲ್ಲಿ ಕಾಯಿಗಳು ಒಂದೇ ಸಮನಾಗಿರದೆ ಮೊಳೆಯುವಿಕೆಯೂ ಸ್ವಲ್ಪ ಕಮ್ಮಿಯಾಗುತ್ತದೆ. ಆದ್ದರಿಂದ ಮಧ್ಯ ಗೊಂಚಲುಗಳು ಹಣ್ಣಾದಾಗ ಅವುಗಳಲ್ಲಿ ಒಂದೇ ಸಮನಾದ ಒಳ್ಳೆಯ ಗೋಟುಗಳನ್ನು ಮಾತ್ರ ಚುನಾಯಿಸಿ ಕೊಳ್ಳಬೇಕು. ಬಹಳ ಹಣ್ಣಾಗಿ ಉದುರಿದ ಗೋಟನ್ನು ಮಾತ್ರ ಆರಿಸಿಕೊಳ್ಳುವ ವಾಡಿಕೆ ಇದ್ದರೂ ೪–೫ ಹಣ್ಣುಗಳು ಉದುರಿದಾಗ ಆ ಗೊಂಚಲನ್ನು ಪೂರ್ತ ಕೊಯಿಸಿಕೊಳ್ಳು ವುದು ಒಳ್ಳೆಯದು.

ಹೀಗೆ ಚುನಾಯಿಸಿದ ಗೋಟುಗಳನ್ನು ಸರಿಯಾದ ರೀತಿಯಲ್ಲಿ ಮೊಳಕೆಯಾಗಲು ಹಾಕಬೇಕು. ತೋಟದ ಒಂದು ಕಡೆ ನೀರಿಗೂ ನೆರಳಿಗೂ ಸೌಕರ್ಯವಿದ್ದೆಡೆ, ಸುಮಾರು ೨-೩ ಅಡಿ ಅಗಲ, ಒಂದು ಅಡಿ ಆಳ, ಬೇಕಾದಷ್ಟು ಉದ್ದದ ಕಡಗುಗಳನ್ನು ತೆಗೆದು, ಒಣಗಿಸಿ, ಅರ್ಧವನ್ನು ಅದೇ ಮಣ್ಣಿನಿಂದ ತುಂಬಿ, ಮೇಲೆ ೩-೪ ಅಂಗುಲ ಮರಳನ್ನು ಹರಡಬೇಕು. ಇವುಗಳ ಮೇಲೆ ಗೋಟುಗಳನ್ನು ಒಂದರಿಂದೊಂದಕ್ಕೆ ಒಂದು ಅಂಗುಲ ಅಂತರವಿಟ್ಟು ತೊಟ್ಟು ಮೇಲಿರುವಂತೆ ನೆಟ್ಟು, ಮರಳಿನಿಂದ ಅವು ಕಾಣದಂತೆ ಮುಚ್ಚಬೇಕು. ಅಲ್ಲಿಂದ ಅವು ಮೊಳೆತು, ೩-೪ ಎಲೆ ಬರುವವರೆಗೂ ೨-೩ ದಿನಕ್ಕೊಮ್ಮೆ ನೀರು ಕೊಡುತ್ತಿರಬೇಕು. ಮರಳಿನಲ್ಲಿ ನೆಡುವುದರಿಂದ ತನುವು ನಿಲ್ಲುವುದಕ್ಕೂ, ಜೌಗು ಇಂಗಿಹೋಗುವುದಕ್ಕೂ, ಗೆದ್ದಲು ಹಾವಳಿಯಿಲ್ಲದಿರುವುದಕ್ಕೂ ಅನುಕೂಲವಾಗುವುದಲ್ಲದೆ, ಮುಂದೆ ಕಿತ್ತು ನೆಡುವಾಗ ಬೇರಿಗೆ ಅಪಾಯವಾಗುವುದಿಲ್ಲ. ನೆಟ್ಟ ೪-೫ ತಿಂಗಳಲ್ಲಿ ಅವನ್ನು ಬೇರೆ ಮಡಿಗಳಿಗೆ ವರ್ಗಾಯಿಸಬೇಕು.

ಮಡಿಗಳನ್ನು ೩-೪ ಅಡಿ ಅಗಲ, ಅರ್ಧ ಅಡಿ ಎತ್ತರ, ಮತ್ತು ಸಾಕಾದಷ್ಟು ಉದ್ದವಿರುವಹಾಗೆ ಮಾಡಬೇಕು. ಅಡಕೆ ಸಾಲುಗಳ ಮಧ್ಯೆ ನೆರಳಿರುವ ಕಡೆ ಇದನ್ನು ಮಾಡಬಹುದು. ಇವುಗಳಲ್ಲಿ ಚೆನ್ನಾಗಿ ಕಳಿತ ಗೊಬ್ಬರ (ಕಾಂಪೋಸ್ಟ್) ಬೆರಸಿ ಸಸಿಯಿಂದ ಸಸಿಗೆ ಒಂದು ಅಡಿ ಅಂತರವಿಟ್ಟು ಮೊಳಕೆಗಳನ್ನು ಕಿತ್ತು ನೆಡಬೇಕು. ಅಲ್ಲಿಂದ ಮುಂದೆ ತೋಟದಲ್ಲಿ ಕಿತ್ತು ನೆಡುವವರೆಗೂ ಸಸಿಗಳು ಈ ಮಡಿಗಳಲ್ಲೇ ಇರಬಹುದು.

ಈ ರೀತಿಯನ್ನು, ಹೆಚ್ಚಿನ ಸಸಿ ಏಳಿಸುವಾಗ ಮಾತ್ರ

ಅನುಸರಿಸಬೇಕು. ಸ್ವಂತಕ್ಕಾಗಿ ಸ್ವಲ್ಪವೇ ಸಸಿ ಏಳಿಸುವ ಮೊದಲೇ ಸರಿಯಾದ ಮಡಿಗಳನ್ನು ಮಾಡಿ ಒಂದು ಅ ಅಂತರವಿಟ್ಟು ಗೋಟುಗಳನ್ನು ನೇರವಾಗಿ ನೆಡಬಹುದ ಹೆಚ್ಚು ಸಸಿಯಿರುವ ಕಡೆ, ಈ ರೀತಿಯಿಂದ ಹುಟ್ಟಿದ ಗೋಟ ಗಳ ಜಾಗಕ್ಕೂ ನೀರು ಮತ್ತು ಉಪಸಾಗುವಳಿ ಒದಗಿಸ ವುದು ತಪ್ಪುತ್ತದೆ.

**ತೋಟ ನೆಡುವಿಕೆ:** ಅಡಕೆಯನ್ನು ಸಾಧಾರಣವಾ ಹೆಚ್ಚು ನೀರಾವರಿ ಅನುಕೂಲವಿರುವ ಅಥವಾ ಹೆಚ್ಚ ಮಳೆಯಾಗುವ ಪ್ರದೇಶಗಳಲ್ಲಿ ಮಾತ್ರ ಬೆಳೆಯುತ್ತಿದ್ದರೂ ಅದು ಬಹಳವಾಗಿ ಭೂಮಿಯ ವೈವಿಧ್ಯತೆ ಮತ್ತು ವಾಯ ಗುಣಗಳ ಅಂತರಕ್ಕೆ ಹೊಂದಿಕೊಳ್ಳುವುದಾಗಿದೆ. ಸಾಮಾನ ವಾಗಿ ಅದು ಮರಳು ಮಿಶ್ರಿತ ಭೂಮಿಯಿಂದ ಜೇಡಿಭೂಮಿ ೧೫ ಅಂಗುಲದಿಂದ ೨೦೦ ಅಂಗುಲ ಮಳೆ, ಮತ್ತು ಸಮುದ ಮಟ್ಟದಿಂದ ೩,೦೦೦ ಅಡಿಗಳ ಎತ್ತರದ ಅಂತರಗಳಲ್ಲಿ ಬೆಳೆಯು ತ್ತಿದೆ. ಆದ್ದರಿಂದ ಚೆನ್ನಾಗಿ ನೀರು ಬಸಿಯುವ ಜಮೀನಿದ್ದು ಅದಕ್ಕೆ ಸಾಕಾಗುವಷ್ಟು ನೆರಳು ಮತ್ತು ನೀರಿನ ಸೌಕರ ಇದ್ದಲ್ಲಿ, ಅಡಕೆಯನ್ನು ಉಷ್ಣವಲಯದ ಎಲ್ಲಾ ಭಾಗಗಳಲ್ಲೂ ಸಮಶೀತೋಷ್ಣದ ಕೆಲಭಾಗಗಳಲ್ಲೂ ಬೆಳೆಯಬಹುದಾಗಿದೆ.

ತೋಟಕ್ಕೆ ಜೌಗು ಅಥವಾ ಚೌಳುಭೂಮಿಯನ್ನು ಆರಿ ಬಾರದು. ಬೇರೆ ಎಲ್ಲಾ ವಿಧದ ಭೂಮಿಯಲ್ಲೂ ಅಡಕೆಯನ್ನ ಬೆಳೆಯಬಹುದು. ಆದರೆ ಮಳೆ ಹೆಚ್ಚಿನ ಪ್ರದೇಶಗಳಲ್ಲಿ ನೀರು ಸುಲಭವಾಗಿ ಬಸಿಯುವಂತೆ ಹೆಚ್ಚಿನ ಕಡಗುಗಳನ್ನು ತೆಗೆಯ ಬೇಕು. ಹಾಗೂ ಮಳೆಯಿಲ್ಲದ ಪ್ರದೇಶಗಳಲ್ಲಿ ಬೇಸಗೆಯಲ್ಲಿ ನೀರು ಹಾಯಿಸಲು ಏರ್ಪಡಿಸಬೇಕು. ತೋಟಕ್ಕೆ ಚುನಾಯಿ

ಸಿದ ಜಮೀನನ್ನು ಸಾಧ್ಯವಾದಷ್ಟು ಮಟ್ಟಿಗೆ ಸಮಮಾಡಿ, ಬೇಲಿ ಹಾಕಬೇಕು. ಬೇಲಿಯಲ್ಲಿ ಬೇಗ ಬೆಳೆದು ಗೊಬ್ಬರಕ್ಕೆ ಉಪಯುಕ್ತವಾದ ಗ್ಲಿರಿಸಿಡಿಯಾ ಗಿಡಗಳನ್ನೂ, ೨೦ ಅಡಿ ಗಳಿಗೊಂದರಂತೆ ಸೊಂಪಾಗಿ ಬೆಳೆಯುವ ಮಾವು, ನೇರಳೆ, ಹಲಸು ಮುಂತಾದ ಮರಗಳನ್ನು ನೆಡಬೇಕು. ಇವುಗಳು ಮುಂದೆ ಹಸಿರೆಲೆ ಗೊಬ್ಬರ ಮತ್ತು ನೆರಳು ಒದಗಿಸುವುವಲ್ಲದೆ, ಫಲದಾಯಕವೂ ಆಗುತ್ತವೆ. ಜೊತೆಗೆ ಅಲ್ಲಲ್ಲಿ ಬಿದಿರುಮೆಳೆ ಗಳನ್ನು ನೆಡುವುದು ಒಳ್ಳೆಯದು.

ಅಡಕೆ ಸಸಿಗಳು ಚೆನ್ನಾಗಿ ನೆರಳಿದ್ದಲ್ಲಿ ಸೊಂಪಾಗಿ ಬೆಳೆದು ಬರಲು ಅನುಕೂಲವಾಗುತ್ತವೆ. ಎಳೆ ಸಸಿಗಳಿಗೆ ಸುತ್ತಲೂ ನೆರಳಿರಬೇಕು. ದೊಡ್ಡ ಮರಗಳಿಗೆ ಪಶ್ಚಿಮ–ದಕ್ಷಿಣದ ಬಿಸಿಲು ನೇರವಾಗಿ ಬೀಳದಂತೆ ಸ್ವಲ್ಪ ನೆರಳಿರುವುದು ಒಳ್ಳೆಯದು. ಸಸಿಗಳನ್ನು ನೆಡುವುದಕ್ಕೆ ಮುಂಚೆ ನೆರಳಿನ ವ್ಯವಸ್ಥೆಯಾಗ ಬೇಕು. ಇದಕ್ಕಾಗಿ ಭೂಮಿ ಫಲವತ್ತಾಗಿದ್ದಲ್ಲಿ ಬಾಳೆಯನ್ನು ಹಾಕಬಹುದು. ಅವು ೨–೩ ವರ್ಷ ಒಳ್ಳೆಯ ನೆರಳು ಒದಗಿಸು ವುವಲ್ಲದೆ ಫಲದಾಯಕವೂ ಆಗಿರುತ್ತವೆ. ಆದರೆ ಅದನ್ನು ಪ್ರಾರಂಭಿಸಲು ಹೆಚ್ಚಿನ ಬಂಡವಾಳ ಬೇಕು. ಇಲ್ಲದಿದ್ದಲ್ಲಿ ಸೆಸ್ಬೇನಿಯಾ ಈಜಿಪ್ಟಿಕಾವನ್ನು ಉತ್ತರ-ದಕ್ಷಿಣ ಸಾಲುಗಳಲ್ಲಿ ಬಿತ್ತಿದಲ್ಲಿ ಅವು ಬೆಳೆದು ಗಿಡಗಳಿಗೆ ಒಳ್ಳೆಯ ನೆರಳು ಒದಗಿಸು ವುದಲ್ಲದೆ ಮುಂದೆ ಅದಕ್ಕೆ ಬೇಕಾದ ಸೊಪ್ಪನ್ನು ಒದಗಿಸುತ್ತದೆ. ಬೇಲಿಯಲ್ಲಿರುವ ಮರಗಳೇ ದೊಡ್ಡ ಸಸಿಗಳಿಗೆ ಮುಂದೆ ನೆರಳು ಒದಗಿಸುತ್ತವೆ.

ಸಸಿಗಳನ್ನು ನೆಡುವ ಅಂತರಗಳಲ್ಲಿ ಬಹಳ ವ್ಯತ್ಯಾಸವಿದೆ. ៩×៩ರಿಂದ ಹಿಡಿದು ೧೨×೧೨ರ ವರೆಗಿನ ಎಲ್ಲಾ ಅಂತರ

ಗಳಲ್ಲೂ ನೆಡುವ ವಾಡಿಕೆಯಿದೆ. ಸಾಧಾರಣವಾಗಿ ಮಲೆನಾಡ ಮತ್ತು ಮೈದಾನಗಳಲ್ಲಿ ೯ × ೯ ಅಡಿ ಅಂತರದಲ್ಲಿ ಹೆಚ್ಚಾ ನೆಡುವ ವಾಡಿಕೆಯಿದ್ದು, ಈ ಅಂತರವೇ ಅನುಕೂಲವಾ ದ್ದೆಂದೂ ಕಂಡುಬಂದಿದೆ. ಎಕರೆಗೆ ಸುಮಾರು ೫೨೦ ಸ ಗಳನ್ನು ನೆಡಬಹುದಾಗಿದ್ದು, ಸಾಧ್ಯವಾದಲ್ಲಿ ಮಧ್ಯ ಉ ಮೆಗೂ ಅವಕಾಶವಿದೆ. ಮುಂದೆ ಸಸಿಗಳನ್ನು ಎಡದಾಯದ ನಾಟುವಾಗ, ಅವುಗಳ ಮಧ್ಯದಲ್ಲಾಗಲೀ ಅಥವಾ ಸಾಲಿ ನಡುವೆಯಾಗಲೀ ನೆಡಬಹುದು. ಇದರಿಂದ ಸಸಿಗಳ ಮಧ ಒಂದೇ ಅಂತರವಿರುತ್ತದೆ.

ತೀರಪ್ರದೇಶದಲ್ಲಿ ಸಾಲಿನಿಂದ ಸಾಲಿಗೆ ೬ ಅಡಿ ಅಂತರವಿಟ್ಟ ಸಾಲಿನ ಮಧ್ಯೆ ೧೨ ಅಡಿ ಇಡುತ್ತಾರೆ. ಎರಡು ಸಾಲಿ ಸಸಿಗಳು ಪರ್ಯಾಯ ಹೊಂದಿರುತ್ತವೆ. ಮುಂದೆ ಈ ಸಸಿಗ ಮಧ್ಯೆ ಬೇರೆ ಸಸಿಗಳನ್ನು ನೆಡುವುದರಿಂದ ೬ × ೬ ಅಡಿ ಅಂತ ವೇರ್ಪಡುತ್ತದೆ. ಇದೂ ಸಮಂಜಸವಾದ ಪದ್ಧತಿ.

ಸಸಿಗಳನ್ನು ನೆಡಲು ಗುಳಿಗಳನ್ನು ಬಹಳ ದೊಡ್ಡದಾ ತೆಗೆಸಬಾರದು. ಅವು ಭೂಮಿಯ ಗುಣಕ್ಕನುಗುಣವಾಗಿ ಬೇಕು. ಸಡಿಲವಾದ ಮರಳು ಮಿಶ್ರಿತ ಭೂಮಿಯಲ್ಲಿ ಹೆಚ್ಚಿನ ಗಾಳಿಯಿರುವೆಡೆ ೨ ೧/೨ ಘನ ಅಡಿಯ ಗುಳಿಗಳೂ ಇತರ ಕಡೆಗಳಲ್ಲಿ ೧ ೧/೨ ಘನ ಅಡಿಯ ಗುಳಿಗಳೂ ಸಾಕಾಗ ತ್ತವೆ. ಬಹಳ ದೊಡ್ಡ ಸಸಿಗಳನ್ನು, ಅಂದರೆ ೩, ೩ ೧/೨ ವರ್ಷದವುಗಳನ್ನು ನೆಡುವ ಕಡೆ ಮಾತ್ರ ಗುಳಿ ಇನ್ನೂ ಸ್ವಲ್ಪ ಆಳವಾಗಿಮಾಡಿದಲ್ಲಿ ಒಳ್ಳೆಯದು. ನೀರು ಮೇಲಿರುವ ಕಡ ಆಳವನ್ನು ಇನ್ನೂ ಕಡಿಮೆಮಾಡಬೇಕು.

ನೆಡಲು ಒಳ್ಳೆಯ ಸಸಿಗಳನ್ನೇ ಆರಿಸಿ, ಅವನ್ನು ಮಣ್ಣು

ಸಮೇತ ತೆಗೆದು ನೆಡುವುದು ಒಳ್ಳೆಯದು. ಇದರಿಂದ ಸಸಿಗಳು ಬೇಗ ಕುದುರುತ್ತವೆ. ದೂರ ಸಾಗಿಸಬೇಕಾದಲ್ಲಿ ೪ರಿಂದ ೬ ಅಂಗುಲ ಮಣ್ಣಿನೊಡನೆ ತೆಗೆದು ಬಾಳೇಪಟ್ಟೆ ಅಥವಾ ಆಲ್ಕತೀನ್ ಕಾಗದದಲ್ಲಿ ಸುತ್ತಿ ಕಳುಹಿಸುವುದು ಒಳ್ಳೆಯದು. ಗುಂಡಿಗಳಲ್ಲಿ ಸುಮಾರು ೬ ಅಂಗುಲ ತಳಮಣ್ಣನ್ನು ಸಡಿಲ ಮಾಡಿ ಮಧ್ಯೆ ಸಸಿಗಳನ್ನು ನೇರವಾಗಿಟ್ಟು, ಸುತ್ತಲೂ ಮಣ್ಣನ್ನು ತುಂಬಿ ಚೆನ್ನಾಗಿ ಅದುಮಬೇಕು. ನೆಟ್ಟಕೂಡಲೇ ನೀರು ಕೊಡಬೇಕು ಮತ್ತು ಅವು ಚೆನ್ನಾಗಿ ನಿಂತು ಬೆಳೆಯಲು ಪ್ರಾರಂಭಿಸುವವರೆಗೂ ಆಗಿಂದಾಗ್ಗೆ ನೋಡಿ ನೀರು ಕೊಡುತ್ತಿರಬೇಕು.

ತೋಟದ ಬೆಳವಣಿಗೆಗೆ ಸಕಾಲದ ಬೇಸಾಯ ಮತ್ತು ಸರಿಯಾದ ನೀರಿನ ಅನುಕೂಲ ಅಗತ್ಯ. ಬೇಸಿಗೆಯಲ್ಲಿ ವಾರಕ್ಕೆ ಒಂದಾವರ್ತಿಯಾದರೂ ನೀರು ಹಾಯಿಸಬೇಕು. ಜೇಡಿ ಭೂಮಿಗಳಲ್ಲಿ ಸ್ವಲ್ಪ ಸಾವಕಾಶವಾಗಿಯೂ ಮರಳು ಮಿಶ್ರಿತ ಭೂಮಿಗಳಲ್ಲಿ ಶೀಘ್ರ ಅಂತರದಲ್ಲೂ ನೀರು ಹಾಯಿಸಬೇಕು. ಆದರೆ ಎಲ್ಲಾ ತೋಟಗಳಲ್ಲೂ ನೀರು ಚೆನ್ನಾಗಿ ಬಸಿದು ಹೋಗುವಂತೆ ಕಡಗುಗಳ ಏರ್ಪಾಡು ಮಾಡಬೇಕು. ಅದರಲ್ಲೂ ಮಲೆನಾಡಿನಲ್ಲಿ ಮಳೆಗಾಲದಲ್ಲಿ ನೀರು ನಿಲ್ಲದಂತೆ ಹೆಚ್ಚಿನ ವ್ಯವಸ್ಥೆಯಿರಬೇಕು.

**ಎಡೆ ನೆಡುವುದು :** ಸಸಿಗಳನ್ನು ಎಡೆ ನೆಡುವುದು ಅಡಕೆ ಬೇಸಾಯದಲ್ಲಿ ಒಂದು ಮುಖ್ಯವಾದ ಅಂಶ. ಅಡಕೆ ತೋಟ ಯಾವಾಗಲೂ ತೋಟವಾಗಿಯೇ ಉಳಿಯಬೇಕು. ಅದಕ್ಕೆ ಸರಿಯಾದ ಏರ್ಪಾಡುಮಾಡದಿದ್ದಲ್ಲಿ ಎಲ್ಲಾ ಮರಗಳು ಒಂದೇ ವಯಸ್ಸಿನವಾಗಿ ಮುಪ್ಪಾದಾಗ ಎಲ್ಲವನ್ನೂ ತೆಗೆದು ಹೊಸದಾಗಿ

ನೆಡಬೇಕಾಗುವುದು. ಇದರಿಂದ ಖರ್ಚು ಹೆಚ್ಚಾಗಿ ಅನೇ ವರ್ಷ ಉತ್ಪತ್ತಿ ಇಲ್ಲದಂತಾಗುತ್ತದೆ. ಇದನ್ನು ತಡೆಗಟ್ಟ ಕ್ರಮವರಿತ ಎಡೆ ನೆಡುವಿಕೆಯೇ ಮಾರ್ಗ. ಮೊದಲು ನಾಟಿ ಸಸಿಗಳು ಸುಮಾರು ೧೫–೨೦ ವರ್ಷವಾದಾಗ ಅವುಗಳ ಮ ಸಸಿಗಳನ್ನು ಪರ್ಯಾಯದಲ್ಲಿ ನೆಡಬೇಕು. ಸಾಮಾನ್ಯವಾ ೯ × ೯ ಅಡಿ ಅಂತರಕೊಟ್ಟಿರುವ ಕಡೆ ೪ ಸಸಿಗಳ ಮ ದಲ್ಲಾಗಲೀ ಅಥವಾ ಸಾಲಿನಲ್ಲಿ ಎರಡು ಸಸಿಗಳ ಮಧ್ಯೆ ಒಂ ರಂತಾಗಲೀ ನೆಡಬೇಕು. ಅಲ್ಲಿಂದ ಮುಂದೆ ೧೫–೨೦ ವರ್ ಗಳಿಗೊಮ್ಮೆ ಪರ್ಯಾಯದಲ್ಲಿ ಸಸಿಗಳ ನಡುವೆ ಹೀಗೆ ಎಳೇಸ ಗಳನ್ನು ನೆಡಬೇಕು. ಹಳೇ ಮರಗಳ ಫಲ ಕಡಿಮೆಯಾದಾ (ಸುಮಾರು ೫೦-೬೦ ವರ್ಷಗಳಲ್ಲಿ) ಅವುಗಳನ್ನು ತೆಗೆದ ಅವುಗಳ ಸ್ಥಳಕ್ಕೆ ಹೊಸ ಸಸಿ ಕಟ್ಟಬೇಕು. ಹೀಗೆ ಕ್ರಮವರಿ ನಾಟಿ ಮಾಡುವುದರಿಂದ ತೋಟದ ಇಳುವರಿ ಯಾವಾಗಲ ಕಡಿಮೆಯಾಗದೆ ಒಂದೇ ರೀತಿಯಲ್ಲಿರುತ್ತದೆ.

**ಮಧ್ಯಮ ಬೇಸಾಯ ಮತ್ತು ಗೊಬ್ಬರ ಕೊಡ ವಿಕೆ:** ಯಾವ ಬೆಳೆಯಾದರೂ ಬೇಸಾಯ ಮತ್ತು ಗೊಬ್ಬ ಕೊಟ್ಟಷ್ಟೂ ಉತ್ಕೃಷ್ಟವಾಗಿ ಬರುತ್ತದೆ. ಅಡಕೆಯೂ ಹಾಗೆಯೇ ಕಳೆಗಳನ್ನು ಆಗಾಗ್ಗೆ ತೆಗೆಯುವುದರಿಂದ ಮಣ್ಣಿನ ಸಾ ಹಾಳಾಗುವುದು ಕಡಿಮೆಯಾಗುತ್ತದೆ; ಮತ್ತು ಬೇಸಾ ಮಣ್ಣನ್ನು ಸಡಲಿಸಿ, ತೇವವನ್ನು ನಿಲ್ಲಿಸಿ, ಬೇರು ಬೆಳೆಯಲ ಅವಕಾಶವುಂಟುಮಾಡುತ್ತದೆ. ಅಡಕೆ ತೋಟಗಳಲ್ಲಿ ಬೇಸಾಯ ಕ್ರಮ ಆಯಾ ಪ್ರದೇಶವನ್ನವಲಂಬಿಸಿದೆ. ಹೆಚ್ಚ ಮಳೆಯಾಗುವ ಮಲೆನಾಡಿನಲ್ಲಿ ಅದಕ್ಕೆ ಹೆಚ್ಚು ಗಮನವೀಯ ಲ್ಪಡುತ್ತದೆ. ವರ್ಷಕ್ಕೆ ಒಂದೆರಡು ಸಲವಾದರೂ ಕಳೆಯನ

ಅವರ ಬೆಳವಣಿಗೆಯನ್ನನುಸರಿಸಿ ತೆಗೆಯಬೇಕು ಮತ್ತು ಒಂದು ಸಲ ದೊಡ್ಡಗತೆ ಕೊಡುವುದು ಅಗತ್ಯ.

ಮಲೆನಾಡಿನಲ್ಲಿ ತೋಟವನ್ನು ಚೆನ್ನಾಗಿ ಅಗೆದು, ಮರದ ಸುತ್ತಲೂ ೨–೨ ೧/೨ ಅಡಿ ಅಂತರಕ್ಕೆ ಗೊಬ್ಬರ ಚೆಲ್ಲಿ, ಅದರ ಮೇಲೆ ಸುಮಾರು ೨ ಅಡಿಯಷ್ಟು ಸೊಪ್ಪನ್ನು ಹಾಕಿ ಮಣ್ಣಿನಿಂದ ಮುಚ್ಚಬೇಕು. ಇದರಿಂದ ಗಿಡಕ್ಕೆ ಸಾಕಷ್ಟು ಗೊಬ್ಬರ ಸಿಕ್ಕುವುದಲ್ಲದೆ, ಬೇರುಗಳು ಹೊರಕಾಣದಂತೆ ಮುಚ್ಚಿಕೊಳ್ಳುತ್ತವೆ. ಇದರ ಜೊತೆಗೆ ಎಲ್ಲಾ ಕಡಗುಗಳನ್ನೂ ದುರಸ್ತು ಗೊಳಿಸಬೇಕು. ತೋಟ ಹೆಚ್ಚಾಗಿದ್ದಲ್ಲಿ ವರ್ಷಕ್ಕೆ ಒಂದು ಭಾಗದಂತೆ ಸ್ವಲ್ಪ ಸ್ವಲ್ಪವಾಗಿ ಈ ಜೇಸಾಯವನ್ನು ಅನುಸರಿಸಬೇಕು. ಇದರಿಂದ ಹೆಚ್ಚಿನ ಮಳೆಯಿಂದ ಮಣ್ಣು ಕೊಚ್ಚಿಹೋಗಿ ಕಾಣುತ್ತಿದ್ದ ಬೇರುಗಳು ಮುಚ್ಚುವುದಲ್ಲದೆ, ಗಿಡಕ್ಕೆ ಬೇಕಾದ ಗೊಬ್ಬರವನ್ನು ಕೊಟ್ಟಂತಾಗುವುದು. ಮೈದಾನ ಪ್ರದೇಶದಲ್ಲಿ ನವೆಂಬರ್–ಡಿಸೆಂಬರ್ ತಿಂಗಳುಗಳಲ್ಲಿ ಗೊಬ್ಬರ ಚೆಲ್ಲಿ, ದೊಡ್ಡಗತೆ ಮಾಡುವ ವಾಡಿಕೆಯಿದೆ. ಗೊಬ್ಬರವನ್ನು ತೋಟಕ್ಕೆಲ್ಲಾ ಚೆಲ್ಲುವುದಕ್ಕಿಂತ ಕ್ರಮವರಿತು ಮರಗಳ ಬುಡದ ಸುತ್ತಲೂ ಹರಡಿ ಅಗೆದು ಬಿಡಬೇಕು. ಇದರಿಂದ ಗೊಬ್ಬರ ಪೋಲಾಗುವುದಿಲ್ಲ.

ಗೊಬ್ಬರವನ್ನು ಸರಿಯಾದ ರೀತಿಯಲ್ಲಿ ಗಿಡಗಳಿಗೆ ಸಿಕ್ಕುವಂತೆ ಮಾಡಲು ಅವುಗಳ ಬುಡದಿಂದ ೧ ೧/೨ ಅಡಿ ಬಿಟ್ಟು ಸುತ್ತಲೂ ೬ ಅಂಗುಲ ಆಳದ ಒಂದು ಸಣ್ಣ ಕಡಗು ತೆಗೆದು, ಅದರಲ್ಲಿ ಗೊಬ್ಬರ, ಸೊಪ್ಪು ಹಾಕಿ ಮುಚ್ಚುವುದೊಳ್ಳೆಯದು. ಇತ್ತೀಚಿನ ಪರಿಶೋಧನೆಗಳಿಂದಲೂ, ರೈತರ ಅನುಭವದಿಂದಲೂ ಕೃತಕ ಗೊಬ್ಬರಗಳಿಂದ ಉತ್ಪತ್ತಿ ಹೆಚ್ಚುವುದು ಕಂಡು

ಬಂದಿದೆ. ಈಗ ಸಾವಯುವ ಗೊಬ್ಬರಗಳ ಪೂರೈಕೆ ಸಾಕಾದಷ್ಟು ಇಲ್ಲವಾದ್ದರಿಂದ, ಇವುಗಳ ಬಳಕೆಯೂ ಅಗತ್ಯ. ಆದರೆ ಇವನ್ನು ಸಾವಯುವ ಗೊಬ್ಬರಗಳ ಜೊತೆಗೆ ಸಾಕಷ್ಟು ಸೇರಿಸಿ ಕೊಡ ಬೇಕು. ಫಲಕೊಡುವ ೫೦೦ ಮರಗಳಿಗೆ ಕ್ರಮವಾಗಿ ೨೫:೨೫:೪೦ ಕಿಲೋಗ್ರಾಂ ಸಾರಜನಕ, ರಂಜಕ ಮತ್ತು ಪೊಟ್ಯಾಷ್ ಸಿಕ್ಕುವಂತೆ ಮಾಡಿರುವ ಮಿಶ್ರಣಗಳನ್ನು ಪ್ರತಿ ಮರಕ್ಕೆ ೧ ೧/೨ ಯಿಂದ ೨ ಕಿಲೋಗ್ರಾಂ ಒದಗಿಸುವುದು ಉತ್ತಮ.

**ಉಪಬೆಳೆಗಳು :** ಅಡಕೆ ತೋಟಗಳಲ್ಲಿ ಉಪಬೆಳೆಗಳನ್ನು ಬೆಳೆಸುವುದು ಸಾಮಾನ್ಯ ವಾಡಿಕೆಯಲ್ಲಿದೆ. ಹೊಸದಾಗಿ ಅಡಕೆ ತೋಟವನ್ನು ಪ್ರಾರಂಭಿಸಬೇಕಾದಲ್ಲಿ, ಅದಕ್ಕೆ ಹೆಚ್ಚು ಹಣದ ಆವಶ್ಯಕತೆಯಿದೆ. ಅಲ್ಲದೆ ಮುಂದೆ ಅದು ಫಲಕೊಡು ವವರೆಗೂ ಅದಕ್ಕೆ ಖರ್ಚು ಮಾಡಬೇಕಾಗಿದೆ. ಈ ಖರ್ಚಿನ ಬಹುಭಾಗವನ್ನು ಉಪಬೆಳೆಗಳಿಂದ ಹೊಂದಬಹುದು. ಕೆಲವು ಉಪಬೆಳೆಗಳು ಅಡಿಕೆ ಸಸಿಗಳಿಗೆ ಬೇಕಾದ ನೆರಳನ್ನು ಒದಗಿಸ ಬಲ್ಲವು. ಈ ಎರಡು ಅನುಕೂಲಗಳಿಂದ ಉಪಬೆಳೆಗಳನ್ನು ಬೆಳೆಯುವುದು ಲಾಭದಾಯಕ. ಆದರೆ ಸ್ಥಳ ಮತ್ತು ಅನು ಕೂಲತೆಗಳಿಗೆ ತಕ್ಕಂಥ ಉಪಬೆಳೆಗಳನ್ನು ಚುನಾಯಿಸಿ ಅವು ಗಳ ಬೆಳೆಗೂ ಸಾಕಾಗುವಷ್ಟು ನೀರು ಮತ್ತು ಗೊಬ್ಬರಗಳನ್ನು ಒದಗಿಸಬೇಕು. ಇಲ್ಲದಿದ್ದಲ್ಲಿ ಉಪಬೆಳೆಗಳು ಸರಿಯಾಗಿರದೆ ಅಡಕೆಯೂ ತೊಂದರೆಗೀಡಾಗುತ್ತದೆ.

'ಬಾಳೆ' ಇವುಗಳಲ್ಲೆಲ್ಲಾ ಮುಖ್ಯ ಮತ್ತು ಸಾಮಾನ್ಯ ವಾದದ್ದು. ಸಾಧಾರಣವಾಗಿ ಬಾಳೆಯನ್ನು ಅಡಕೆ ನೆಡು ವುದಕ್ಕೆ ೫–೬ ತಿಂಗಳ ಮುಂಚೆಯೇ ನೆಟ್ಟು, ಅವು ಬೆಳೆದಮೇ

ಅವುಗಳ ಮಧ್ಯೆ ಅಡಕೆ ಸಸಿಗಳನ್ನು ನೆಡುವುದು ಒಳ್ಳೆಯದು. ಹಣ್ಣು ಎಲೆಗಳ ಜೊತೆಗೆ ನಾರೂ, ಒಣ ಎಲೆಗಳಿಂದ ದೊನ್ನೆಗಳೂ ಮತ್ತು ತರಕಾರಿಯಾಗಿ ಉಪಯೋಗಿಸಲು ದಿಂಡು ಮತ್ತು ಹೂವೂ ಸಿಗುತ್ತವೆ. ವೀಳೇದೆಲೆ ಹಂಬನ್ನು ಅಡಕೆ ತೋಟಗಳಲ್ಲಿ ಸಸಿ ನೆಡುವುದಕ್ಕೆ ಮೊದಲಾಗಲೀ, ನಂತರವಾಗಲೀ ಬೆಳೆಸುವುದು ಅನೇಕ ಕಡೆ ವಾಡಿಕೆಯಲ್ಲಿದೆ. ಹಂಬನ್ನು ಮರಕ್ಕೆ ಹಬ್ಬಿಸಿ, ಅದಕ್ಕೆ ಹೆಚ್ಚಿನ ಗೊಬ್ಬರ ಕೊಟ್ಟು ಸಾಗುವಳಿಯನ್ನು ಮಾಡುವುದರಿಂದ, ಅಡಕೆ ಮರಕ್ಕೂ ಅನುಕೂಲವಾಗುತ್ತದೆ. ರೈತರಿಗೂ ಅಡಕೆ ಮತ್ತು ಎಲೆಯಿಂದ ದ್ವಿವಿಧ ಉತ್ಪತ್ತಿಯಾಗುತ್ತದೆ. ಮಳೆ ಹೆಚ್ಚಾದ ಪ್ರದೇಶಗಳಲ್ಲಿ ಮೆಣಸನ್ನು ಇದೇ ರೀತಿಯಲ್ಲಿ ಬೆಳೆಸಬಹುದು. ಮತ್ತು ಕಡಗುಗಳ ಇಬ್ಬದಿಯಲ್ಲೂ ಯಾಲಕ್ಕಿಯನ್ನು ನೆಟ್ಟು, ಅದರಿಂದ ಹೆಚ್ಚಿನ ಲಾಭ ಪಡೆಯಬಹುದು. ಮೈದಾನ ಪ್ರದೇಶದ ಕೆಲವೆಡೆ ಕಬ್ಬನ್ನು ಉಪಬೆಳೆಯಾಗಿ, ಸಸಿನೆಟ್ಟ ೫–೬ ವರ್ಷಗಳವರೆಗೆ ಬೆಳೆದು ತೆಗೆದುಕೊಳ್ಳುತ್ತಾರೆ. ಇದೂ ಲಾಭದಾಯಕವಾಗಿದೆ. ಅನಾನಾಸ್, ಶುಂಠಿ ಅಥವಾ ಅರಶಿನವನ್ನು ಸಾಮಾನ್ಯವಾಗಿ ಬೆಳೆಯಬಹುದು. ತೆಂಗಿನ ಮರಗಳನ್ನೂ, ಇತರ ಹಣ್ಣಿನ ಗಿಡಗಳನ್ನೂ ತೋಟದ ಸುತ್ತಲೂ ನೆಟ್ಟು, ಉತ್ಪತ್ತಿ ಹೆಚ್ಚಿಸಿಕೊಳ್ಳಬಹುದು. ಮುಖ್ಯವಾಗಿ ತೋಟದ ಎಲ್ಲಾ ಕಡಗುಗಳ ಇಕ್ಕೆಡೆಯ ಇಳಿಜಾರಿನಲ್ಲೂ 'ಪ್ಯಾರಾ' ಹುಲ್ಲನ್ನು ನೆಡುವುದರಿಂದ, ವರ್ಷವೆಲ್ಲಾ ದನಗಳಿಗೆ ಹಸರು ಹುಲ್ಲಿನ ಮೇವನ್ನು ಒದಗಿಸಿಕೊಳ್ಳಬಹುದು.

ನಿಧಾನವಾಗಿ ಬೆಳೆಯುವ ಬಹು ವಾರ್ಷಿಕ ಬೆಳೆಗಳಲ್ಲಿ, ಬೇಗ ಬೆಳೆದು ಉತ್ಪತ್ತಿ ಕೊಡುವ ಉಪಬೆಳೆಗಳು ರೈತನಿಗೆ

ಬಹಳ ಸಹಾಯಕವಾಗುವುವು. ಆದರೆ ಕಾಲ ಮತ್ತು ಸ್ಥಳಕ್ಕೆ
ಹೊಂದಿಕೊಳ್ಳುವಂತಹ ಉಪಬೆಳೆಗಳನ್ನು ಬೆಳೆಯಬೇಕು.
ಹಾಗೆ ಬೆಳೆದಲ್ಲಿ ಅಡಕೆಗೂ, ಉಪಬೆಳೆಗಳಿಗೂ ಸಾಕಾಗುವಷ್ಟು
ಗೊಬ್ಬರ ಮತ್ತು ನೀರನ್ನು ಒದಗಿಸಬೇಕು. ಇಲ್ಲದಿದ್ದಲ್ಲಿ
ಎರಡು ಬೆಳೆಯೂ ಕೆಟ್ಟು ದುಷ್ಪರಿಣಾಮ ಉಂಟಾಗುತ್ತದೆ.

**ಕೀಟಗಳ ಉಪದ್ರವ ಮತ್ತು ನಿವಾರಣೆ:** ಇತರ
ಬೆಳೆಗಳಂತೆ ಅಡಕೆಗೂ ಅನೇಕ ಉಪದ್ರವ ಕೀಟಗಳ ತೊಂದರೆ
ಯಿದ್ದರೂ ಬಹಳ ಹೆಚ್ಚು ಹಾನಿಮಾಡುವುದಿಲ್ಲ. ಹಾಗೆ
ಬರುವ ಕೀಟಗಳ ಹಾವಳಿಯನ್ನು ಸುಲಭವಾಗಿ ನಿವಾರಿಸ
ಬಹುದು. ಮುಖ್ಯವಾಗಿ ಒಂದು ತರಹ ಹೇನುಗಳಿಂದ
(ಮೈಟ್ಸ್) ಹೆಚ್ಚು ತೊಂದರೆಯಾಗುತ್ತದೆ. ಬೇಸಿಗೆಯಲ್ಲಿ ಇವು
ಬಹು ಬೇಗ ಹೆಚ್ಚಿ ಎಲೆಗಳ ತಳವನ್ನೆಲ್ಲಾ ಆಕ್ರಮಿಸಿ, ಸಾರ
ವನ್ನು ಹೀರಿ ಜೀವಿಸುವುದರಿಂದ, ಎಲೆಗಳು ಹಳದೀ ಬಣ್ಣಕ್ಕೆ
ತಿರುಗಿ ಪೂರ್ತಾ ಒಣಗಿಹೋಗುತ್ತವೆ. ಬಹಳ ಹೆಚ್ಚಾದಲ್ಲಿ
ಎಳೇಸಸಿಗಳು ಸಾಯಲೂ ಬಹುದು. ದೊಡ್ಡ ಮರಗಳು ಸಾಯ
ದಿದ್ದರೂ ಎಲೆಗಳ ನಷ್ಟದಿಂದ ಇಳುವರಿ ಕಮ್ಮಿಯಾಗುತ್ತದೆ.
ಒಂದೆರಡು ದೊಡ್ಡ ಮಳೆ ಬಿದ್ದಲ್ಲಿ ಇದರ ಹರಡುವಿಕೆ ತಾನಾಗಿ
ಕಡಿಮೆಯಾಗುತ್ತದೆ. ಹಾಗೆ ಹೇನುಗಳಿರುವ ಎಲೆಗಳಿಗೆ
೦.೨೫% 'ಕೆಲ್‌ತೇನ್' ಎಂಬ ದ್ರಾವಕವಾಗಲೀ, ೦.೦೫%
'ಫಾಲಿಡಾಲ್' ಅಥವಾ ಎಂಡ್ರಿನ್ ಆಗಲೀ ಅಥವಾ ೨-೩
ಗ್ಯಾಲನ್ ನೀರಿನಲ್ಲಿ ಒಂದು ಔನ್ಸ್ ಗಂಧಕದ ಪುಡಿ ಕಲಸಿ
ಸಿಂಪರಿಸುವುದರಿಂದಾಗಲೀ ಇವುಗಳನ್ನು ನಾಶಮಾಡಬಹುದು.

ಕೆಲವೆಡೆ 'ಗೊಬ್ಬರದ ಹುಳುಗಳು' ಬೇರುಗಳನ್ನು ಕಡಿದು
ತಿಂದು ತೊಂದರೆಮಾಡುತ್ತವೆ. ಇದರಿಂದ ಎಳೆ ಸಸಿಗಳು

ಸತ್ತು, ದೊಡ್ಡ ಸಸಿಗಳಲ್ಲಿ ಫಲ ಕಮ್ಮಿಯಾಗುತ್ತದೆ. 'ಗೆದ್ದಲು ಹುಳುಗಳೂ' ಎಳೆ ಸಸಿಗೆ ತೊಂದರೆಮಾಡುವುದುಂಟು. ಅಂತಹ ಮರದ ಬುಡಗಳನ್ನು ಕೆದಕಿ, 'ಹೆಪ್ಟಾಕ್ಲೋರ್', 'ಇಂಟಾಕ್ಸ್' ಅಥವಾ 'ಆಲ್ಡ್ರಿಕ್ಸ್' ದ್ರಾವಕವಿರುವ ನೀರನ್ನಾಗಲೀ ಅಥವಾ ಕ್ಲೋರಡೇನ್ ಪುಡಿಯನ್ನಾಗಲೀ ಸುತ್ತಲೂ ಚೆಲ್ಲಿ ಕವಡಬೇಕು. ಇದರಿಂದ ಆ ಹುಳುಗಳು ನಾಶಹೊಂದುತ್ತವೆ.

'ಚಿಪ್ಪಿನ ಹುಳ', 'ತಿಗಣೆ' 'ಇತರ ವಿಧದ ಹೇನುಗಳು' ಇವುಗಳು ಕೆಲವೆಡೆ ಅಡಕೆ ಎಲೆಯ ತಳಭಾಗದಲ್ಲೂ, ಗೊಂಚಲುಗಳ ಮೇಲೂ ಬೆಳೆದು ಸಸಿಯ ಮತ್ತು ಕಾಯಿಯ ಬೆಳವಣಿಗೆಯನ್ನು ತಡೆಯುತ್ತವೆ. ಆದಕ್ಕೂ 'ಫಾಲಿಡಾಲ್', 'ಎಂಡ್ರಿನ್' ಅಥವಾ ಹೊಂಗೆಎಣ್ಣೆ ಸಾಬೂನು ಇವುಗಳನ್ನು ಸಿಂಪರಿಸುವುದರಿಂದ ಹೋಗಲಾಡಿಸಬಹುದು.

ಮೈದಾನ ಪ್ರದೇಶದಲ್ಲಿ 'ಅಳಿಲು'ಗಳಿಂದ ಬಹಳ ನಷ್ಟ ವಾಗುತ್ತದೆ. ಅವು ತೋಟದ ಬೇಲಿಯ ಮರದ ಮೇಲಿಂದ ಹಾಯ್ದು ಬಂದು ಎಳೇ ಕಾಯಿಯನ್ನು ಕಚ್ಚಿ ಉದುರಿಸುತ್ತವೆ. ಕಾಯಿಗಳು ಸುಮಾರು ೨-೩ ತಿಂಗಳಿನವಾದಾಗ ಮಾತ್ರ ಅವುಗಳನ್ನು ಉದುರಿಸುವುದರಿಂದ ಬೇಲಿಯ ಮರಗಳ ಗೊಂಚಲಿನಲ್ಲಿ ಕಾಯಿ ೨-೩ ತಿಂಗಳಾದಾಗ ಅವಕ್ಕೆ ೫.% 'ಜಿಂಕ್ ಫಾಸ್ಫೈಡ'ನ್ನೂ ಸ್ವಲ್ಪ ಬೆಲ್ಲವನ್ನೂ ಕಲಸಿ ಸಿಂಪರಿಸಿದಲ್ಲಿ ಅವುಗಳ ಹಾವಳಿ ನಿಂತುಹೋಗುತ್ತದೆ.

ಕೆಲವು ಕಡೆ 'ಮರ ಕೊರೆಯುವ', 'ಕಾಯಿ ಕೊರೆಯುವ' ಮತ್ತು 'ಸಿಂಗಾರವನ್ನು ಕೊರೆಯುವ' ಹುಳುಗಳು ಕಂಡು ಬಂದಿವೆ. ಅಂಥಾ ಸ್ಥಳಗಳಲ್ಲಿ ಮರಕ್ಕೆ, ಗೊಂಚಲಿಗೆ ಅಥವಾ ಸಿಂಗಾರಕೆ ೫% 'ಬಿ.ಹೆಚ್.ಸಿ' ಪುಡಿಯನ್ನು ಡಸ್ಟರಿನಿಂದ

ಉದುರಿಸುವುದರಿಂದ ಅದರ ಮುಂದಿನ ಹರಡುವಿಕೆಯನ್ನು ತಡೆಗಟ್ಟಬಹುದು.

**ಅಡಕೆಯ ರೋಗಗಳು :** ಅಡಕೆಗೆ ಅನೇಕ ರೋಗಗಳಿದ್ದು ಅದರಿಂದ ಬಹಳ ನಷ್ಟವಾಗುತ್ತಿದೆ. ಹೆಚ್ಚು ಮಳೆ ಪ್ರದೇಶಗಳಲ್ಲಿ 'ಕೊಳೇರೋಗ' ಅಥವಾ 'ಮಹಳಿ' ಪ್ರಧಾನ ರೋಗ. ಇದರಿಂದ ಗೊಂಚಲಿನಲ್ಲಿ ಕಾಯಿಯ ತೊಟ್ಟು ಕೊಳೆತು ಎಲ್ಲಾ ಉದುರಿಹೋಗುತ್ತವೆ. ಇದನ್ನು ತಡೆಗಟ್ಟದೆ ಬಿಟ್ಟಲ್ಲಿ ಕೆಲವು ಸಮಯ ಮರದ ತುದಿಯನ್ನೂ ಕೊಳೆಯುವಂತೆ ಮಾಡುತ್ತವೆ. ಇದಕ್ಕೆ ಸರಿಯಾಗಿ ತಯಾರಿಸಿದ ಬೋರ್ಡೋ ದ್ರಾವಣವನ್ನು ಮುಂಗಾರು ಪ್ರಾರಂಭದ ಮೊದಲು ಮತ್ತು ಮಳೆಗಾಲದ ಮಧ್ಯೆ ಬಿಡುವಾದಾಗ ಹೀಗೆ ಎರಡು ಸಲ ಚೆನ್ನಾಗಿ ಸಿಂಪರಿಸುವುದರಿಂದ ತಡೆಗಟ್ಟಬಹುದು. ಸುಲಭವಾಗಿ ನೀರಿನಲ್ಲಿ ಕಲೆಸಿ ಸಿಂಪರಿಸಬಹುದಾದ ಅನೇಕ ದ್ರಾವಣಗಳು ಮಾರಾಟಕ್ಕಿದ್ದರೂ, ಹೊಸತಾದ ಬೋರ್ಡೋ ದ್ರಾವಣದಷ್ಟು ಫಲಕಾರಿಯಲ್ಲ.

'ಅಣಬೇ' ರೋಗ ಮೈದಾನದಲ್ಲೂ ಮಲೆನಾಡಿನಲ್ಲೂ ಇರುವ ಇನ್ನೊಂದು ದೊಡ್ಡ ವಿನಾಶಕಾರೀ ರೋಗ. ಇದು ಮಣ್ಣಿನ ಮೂಲಕ ಬೇರುಗಳಿಗೆ ತಗುಲಿ ಮರಕ್ಕೆ ಹರಡುವುದರಿಂದ ರೋಗದ ಚಿಹ್ನೆಗಳು ಕಾಣುವ ವೇಳೆಗೆ ಮರಕ್ಕೆ ರೋಗ ಚೆನ್ನಾಗಿ ಹರಡಿ, ಅದನ್ನು ಉಳಿಸಲು ಸಾಧ್ಯವಾಗುವುದಿಲ್ಲ. ಅಂಥಾ ರೋಗ ತಗುಲಿದ ಮರಗಳನ್ನು ಅಣಬೆ ಬರುವುದಕ್ಕೆ ಮುಂಚೆ ಬೇರು ಸಮೇತ ಅಗೆದು ತೆಗೆದು, ರೋಗದ ಭಾಗವನ್ನು ಸುಡಬೇಕು. ಹಾಗೂ ಅದು ಇದ್ದ ಗುಂಡಿಗೆ ಸತ್ತೆ ತುಂಬಿ ಸುಡುವುದರಿಂದ ಸುತ್ತಲೂ ಊದಿರಬಹುದಾ

ರೋಗದ ಬೂಷ್ಟು ನಾಶವಾಗುತ್ತದೆ. ಅಲ್ಲದೆ ಇದು ಇನ್ನೂ ಬೇರೆ ಗಿಡಗಳಿಗೆ ಹರಡದಂತೆ ಸುತ್ತಲಿರುವ ಮರಗಳ ಸುತ್ತಲೂ ಒಂದು ಸಣ್ಣ ಕಡಗು ತೆಗೆದು ಅದರಲ್ಲಿ ಗಿಡ ಒಂದಕ್ಕೆ ೨ ಪೌಂಡಿನಂತೆ 'ಗಂಧಕದ' ಪುಡಿಯನ್ನು ಹಾಕಿ ಮುಚ್ಚಬೇಕು. ಇದರಿಂದ ಅದರ ಹರಡುವಿಕೆ ಕಡಿಮೆಯಾಗುವುದೆಂದು ಕಂಡು ಬಂದಿದೆ.

'ರಸ ಸೋರುವಿಕೆ' ಜೌಗುಪ್ರದೇಶದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಕಾಂಡದಲ್ಲಿ ಅಲ್ಲಲ್ಲಿ ಬಿರುಕು ಬಿಟ್ಟು, ಕೊಳಿತು ರಸ ಸೋರುತ್ತದೆ. ಕೊಳೆತಿರುವಷ್ಟು ಭಾಗವನ್ನು ಕೊಚ್ಚಿ ತೆಗೆದುಹಾಕಿ, ಅಲ್ಲಿಗೆ ಕಾಸಿದ ಡಾಮ್ರು ಸವರುವುದರಿಂದ ಇದರ ಹರಡುವಿಕೆಯನ್ನು ತಡೆಗಟ್ಟಬಹುದು.

'ಸುಳಿ ಕೊಳೆಯುವಿಕೆ' ಮತ್ತು 'ಹುಸಿ ಸುಳಿ ಕೊಳೆಯುವಿಕೆ' ಕೆಲವು ಭಾಗಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದನ್ನು ಉದಾಸೀನ ಮಾಡಿದಲ್ಲಿ ಮರವನ್ನು ಕೊಂದು ತೋಟಕ್ಕೆಲ್ಲಾ ಹರಡುತ್ತದೆ. ಸುಳಿಯು ಒಣಗಿ, ಎಳೆದಲ್ಲಿ ಸುಲಭವಾಗಿ ಕಿತ್ತುಬರುತ್ತದೆ. ಅದರ ಬುಡದ ಭಾಗವು ಕೊಳೆತು ದುರ್ವಾಸನೆ ಬರುತ್ತಿರುತ್ತದೆ. ಸುಳಿ ಕೊಳೆಯುವಿಕೆಯು ಶಿಲೀಂಧ್ರ ಸಂಬಂಧವಾಗಿಯೂ, ಹುಸಿ ಕೊಳೆಯು ರೋಗಾಣು (ಬ್ಯಾಕ್ಟೀರಿಯಾ) ಸಂಬಂಧವಾಗಿಯೂ ಉತ್ಪನ್ನವಾಗುತ್ತದೆ. ಹಾಗೆ ಕೊಳೆತ ತುದಿ ಭಾಗವನ್ನು ಕಡಿದು ತೆಗೆದು ಶುಚಿಮಾಡಿ ೧% ಬೋರ್ಡೋ ದ್ರಾವಣವನ್ನು ಸಿಂಪರಿಸುವುದರಿಂದ ಮೊದಲನೆಯದೂ, ೦.೫% 'ಸೆರಸಾನ್' ವೆಟ್ಟನ್ನು ಸಿಂಪರಿಸುವುದರಿಂದ ಎರಡನೆಯದೂ ನಿವಾರಣೆಯಾಗುತ್ತದೆ.

"ಹಿಡಿಮುಂಡಿಗೆ" ರೋಗ ಎಲ್ಲಾ ಕಡೆಯಲ್ಲೂ ಕಂಡು

ಬರುತ್ತದೆ. ಇದು ತಗುಲಿದಲ್ಲಿ ಎಲೆಗಳು ಕ್ರಮೇಣ ಸಣ್ಣ ಸಣ್ಣವಾಗಿ, ಕಾಂಡವು ಚೂಪಾಗಿ ಬೆಳೆದು, ಇಳುವರಿ ಕಡಿಮೆಯಾಗಿ, ಕೊನೆಗೆ ಪೂರ್ತ ತುದಿಯೇ ಮುರಿದುಬೀಳುತ್ತದೆ. ಇದರ ಕಾರಣ ಸರಿಯಾಗಿ ತಿಳಿಯದಿದ್ದರೂ ೧ ತೊಲ ಜಿಂಕ್ ಸಲ್ಫೇಟ್, ೨ ತೊಲ ಮೈಲುತುತ್ತ ಮತ್ತು ೨ ತೊಲ ಸುಣ್ಣದ ಬೆರಿಕೆ ಪುಡಿಯನ್ನು ಮರದ ಬೇರಿನ ಸುತ್ತಲೂ ಭೂಮಿಯಲ್ಲಿ ಸೇರಿಸುವುದರಿಂದಲೂ, ಮರ ೧ಕ್ಕೆ ಒಂದು ತೊಲ ಜಿಂಕ್ ಸಲ್ಫೇಟನ್ನು ನೀರಿನಲ್ಲಿ ಕರಗಿಸಿ ಎಲೆಗಳಿಗೆ ಸಿಂಪರಿಸು ವುದರಿಂದಲೂ ಉತ್ತಮಗೊಂಡಿವೆ. ಆದರೆ ಜೌಗು ಇರದಂತೆ ಚೆನ್ನಾಗಿ ಕಡಗುಗಳನ್ನು ಒದಗಿಸುವುದು ಅತ್ಯಾವಶ್ಯಕ.

'ಕಾಯಿ ಬಿರಿಯುವಿಕೆ'ಯು ಎಳೇ ಸಸಿಗಳಲ್ಲಿ ಹೆಚ್ಚು ಸಾರದಿಂದಾಗಿ ಉಂಟಾಗುತ್ತದೆ. ಅಂತಹ ಮರಗಳನ್ನು ಗುರುತುಮಾಡಿ, ಅವುಗಳ ಗೊಂಚಲಲ್ಲಿ ಕಾಯಿಗೀಗೆ ಸುಮಾರು ೩–೪ ತಿಂಗಳು ವಯಸ್ಸಾದಾಗ, ಗೊನೆಯನ್ನು ಸ್ವಲ್ಪ ಜಗ್ಗಿ ಯಾಗಲೀ ಅಥವಾ ಗೊನೆಯ ಕಾಂಡಕ್ಕೆ ಗಾಯ ಮಾಡಿ ಯಾಗಲೀ ಸಾರ ಹೋಗುವುದನ್ನು ಕಡಿಮೆಮಾಡಿದಲ್ಲಿ ಕಾಯಿ ಬಿರಿಯುವುದು ನಿಲ್ಲುತ್ತದೆ. ಅನೇಕ ತರದ 'ಎಲೆಮುಚ್ಚಿ'ಗಳು ಕಾಣಬರುತ್ತವೆ. ಇವನ್ನೆಲ್ಲಾ ೧% 'ಬೋರ್ಡೋ' ದ್ರಾವಣ ವನ್ನು ಸಿಂಪರಿಸುವುದರಿಂದ ಹೋಗಲಾಡಿಸಬಹುದು. ಅಗೆ ಪಾತಿಯಲ್ಲಿ 'ಸಸಿ ಕೊಳೆಯುವ' ರೋಗವು ಕಾಣಿಸಿದಲ್ಲಿ ಅಂತಹ ಪಾತಿಗೆ ೦.೫% 'ಸೆರೋಸಾನ್ ವೆಟ್' ನೀರನ್ನು ಹಾಯಿಸುವುದರಿಂದ ತಡೆಗಟ್ಟಬಹುದು.

ಕೆಲವೆಡೆ ಈಗ ಹೊಸತಾದ 'ಹಳದೀ ರೋಗ' ಕಾಣಿಸ ಹತ್ತಿದೆ. ಕಡಗುಗಳನ್ನು ಸರಿಪಡಿಸಿ, ಚೆನ್ನಾಗಿ ಗೊಬ್ಬರ ಕೊಟ್ಟಲ್ಲಿ ಇವು ಉತ್ತಮಗೊಳ್ಳುತ್ತವೆ.

**ತಯಾರಿಕೆ:** ಅಡಕೆಯನ್ನು ಎರಡು ಮುಖ್ಯ ವಿಧವಾಗಿ ತಯಾರಿಸಿ ಉಪಯೋಗಿಸುತ್ತಾರೆ. ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಬಹುವಾಗಿ ಹಣ್ಣಡಕೆಯನ್ನು ಕೊಯ್ದು, ಒಣಗಿಸಿ, ಸಿಪ್ಪೆ ಸುಲಿದು ,'ಚಾಲೀ' ಅಥವಾ 'ಗೋಟು' ಮಾಡಿ ಮಾರುತ್ತಾರೆ. ಉಳಿದ ಪ್ರದೇಶಗಳಲ್ಲಿ ಹಸಿ ಅಡಕೆಗೆ ಸುಮಾರು ೭ ೧/೨, ೮ ತಿಂಗಳ ವಯಸ್ಸಾದಾಗ ಕೊಯ್ದು, ಸುಲಿದು, ತಿರುಳನ್ನು ಬೇರೆ ಬೇರೆ ವಿಧವಾಗಿ (ಮಾರು ಕಟ್ಟೆಗನುಗುಣವಾಗಿ) ಹೆಚ್ಚಿ, ಬೇಯಿಸಿ, ಒಣಗಿಸಿ, 'ಚೂರು' 'ಪೋಡಿ' 'ಬಟ್ಲು' 'ಉಂಡೆ' ಎಂಬ ವಿಧಗಳನ್ನು ಮಾಡಿ ಮಾರುತ್ತಾರೆ. ಈ ವಿಧಗಳಲ್ಲೂ ಅನೇಕ ರೀತಿಗಳಿವೆ.

'ಚಾಲಿ' ಮಾಡಲು ಒಳ್ಳೆಯ ಹಣ್ಣಾದ ಅಡಕೆಯೇ ಉಪಯೋಗಕ್ಕೆ ಬರತಕ್ಕದ್ದು. ಗೊಂಚಲಿನಲ್ಲಿ ಕೆಲವು ಹಣ್ಣಾಗಿ ಉದುರಿದಾಗ, ಆ ಗೊಂಚಲನ್ನು ಕೊಯ್ದು, ಬಿಸಿಲಿನಲ್ಲಿ ಹರಡಿ ಸುಮಾರು ೪೦–೪೫ ದಿನ ಒಣಗಿಸಿದಲ್ಲಿ ಸಿಪ್ಪೆ ಸಡಿಲವಾಗಿ ಸುಲಿಯಲು ಸುಲಭವಾಗುತ್ತದೆ. ಅವನ್ನು ಒಣಗಿದ ತಕ್ಷಣವೇ ಆಗಲಿ, ಅಥವಾ ದಾಸ್ತಾನುಮಾಡಿ ಮಾರುಕಟ್ಟೆಯು ಅನುಕೂಲವಾದಾಗಲಾಗಲಿ ಸುಲಿದು ಮಾರಾಟ ಮಾಡಬಹುದು. ವರ್ಷಕ್ಕೆ ಗೊನೆಗಳಿಗನುಸಾರವಾಗಿ ಸುಮಾರು ೩–೪ ಕೊಯ್ಲುಗಳಾಗುತ್ತವೆ.

'ಚಿಕ್ಕಣಿ' ಅಥವಾ ಬೇಯಿಸಿದ ವಿವಿಧ ತರದ ಅಡಕೆಯನ್ನು ತಯಾರಿಸಲು, ಗೊಂಚಲಿನಲ್ಲಿ ಅಡಕೆಯು ಸುಮಾರು ೭ ೧/೨ ಯಿಂದ ೮ ೧/೨ ತಿಂಗಳ ವಯಸ್ಸಿನವಾದಾಗ ಅವನ್ನು ಕೊಯ್ದು ಕೂಡಲೇ ಸಿಪ್ಪೆ ಸುಲಿದು, ಒಳಗಿನ ತಿರುಳು ಅಥವಾ ಉಂಡೆಯನ್ನು ಚೂರುಮಾಡುತ್ತಾರೆ. ಉದ್ದ

ವಾಗಿ ಸಣ್ಣ ತುಂಡುಗಳಾಗಿ ಕತ್ತರಿಸುವುದರಿಂದ 'ಚೂರು' ೪ ರಿಂದ ೬ ಸಲ ಉದ್ದವಾಗಿಯೂ ಒಂದು ಸಲ ಮಧ್ಯವಾ ಕತ್ತರಿಸಿದಲ್ಲಿ ಬರುವ ತ್ರಿಕೋಣಾಕಾರದ 'ಫ್ರೋಡಿ'ಯೂ ಒಂದೇ ಸಲ ಅಡ್ಡಕ್ಕೆ ಕತ್ತರಿಸಿ ಎರಡು ಹೋಳುಗಳಾಗಿ ಮಾಡು ವುದರಿಂದ 'ಬಟ್ಟಲು' ಅಡಕೆಯೂ, ಪ್ರತಿಯೊಂದನ್ನು ಕಾಯಿಯ ಪೂರ್ತ ಹಾಗೆಯೇ ಬೇಯಿಸಿದಲ್ಲಿ 'ಉಂಡೆ'ಯು ತಯಾರಾಗುತ್ತದೆ. ಇವುಗಳನ್ನು ವಯಸ್ಸು, ಬೇಯಿಸಿ ಅಂತರ ಮತ್ತು ಬಣ್ಣದ ಆಧಾರಗಳ ಮೇಲೆ ಅನೇ ವಿಧಗಳಾಗಿ ವಿಂಗಡಿಸಬಹುದು. ಸಾಧಾರಣವಾಗಿ ವರ್ಷಕ್ಕೆ ಮೂರು ನಾಲ್ಕು ಸಲ ಹೀಗೆ ಕೊಯ್ಯಬೇಕಾಗುತ್ತದೆ.

ಬೇಯಿಸಲು ಕೆಲವೆಡೆ ಕಳೆದ ವರ್ಷ ಅಡಕೆ ಬೇಯಿಸಿ ನೀರನ್ನು ಹಾಗೆಯೇ ಕುದಿಸಿ ಗಟ್ಟಿಮಾಡಿ ಇಡುತ್ತಾರೆ. ಇದನ್ನು ಕರಗಿಸಿ ಪುನಃ ಉಪಯೋಗಿಸುತ್ತಾರೆ. ಇದಕ್ಕೆ 'ಚೊಗರು' ಎಂದು ಹೆಸರು. ಇದರಲ್ಲಿ ಬೇಯಿಸುವುದರಿಂದ ಒಳ್ಳೆಯ ಬಣ್ಣ ಬರಲು ಅವಕಾಶವಿದೆ. ಸಾಮಾನ್ಯವಾಗಿ ಮಲೆನಾಡು ಮತ್ತು ತೀರಪ್ರದೇಶಗಳಲ್ಲಿ ಇದರ ಬಳಕೆ ಹೆಚ್ಚಿನ ವಾಡಿಕೆಯಲ್ಲಿದೆ ಮೈದಾನಪ್ರದೇಶದಲ್ಲಿ ಅಷ್ಟಾಗಿ ಚೊಗರನ್ನು ಕೂಡಿಟ್ಟು ಉಪಯೋಗಿಸುವುದಿಲ್ಲ. ಕಾರಣ ಚೂರು, ಫ್ರೋಡಿಗೆ ಹೆಚ್ಚಿನ ಬಣ್ಣದ ಆವಶ್ಯಕತೆಯಿಲ್ಲ. ನೀರಿನಲ್ಲಿ ಅರಳೀ, ಆಲ, ನೇರಳೆ ಗಂಧ ಮೊದಲಾದ ಮರದ ಚಕ್ಕೆಗಳನ್ನು ಬೇಯಿಸಿ ತೆಗೆದು ಹಾಕುವುದರಿಂದ ನೀರು ಕಂದುಬಣ್ಣದ್ದಾಗುತ್ತದೆ. ಇದರಲ್ಲಿ ಅಡಕೆಯನ್ನು ಬೇಯಿಸಿ ತೆಗೆಯುತ್ತಾರೆ. ಸಾಧಾರಣವಾಗಿ ಒಂದುಸಲ ತಯಾರಾದ ನೀರಿನಲ್ಲಿ ೨–೩ಕ್ಕಿಂತ ಹೆಚ್ಚಿನ ಸಲ ಅಡಕೆಯನ್ನು ಬೇಯಿಸುವುದಿಲ್ಲ. ಸುಮಾರು ಕಾಲು ಗಂಟೆ

ಯಿಂದ ಅರ್ಧ ಗಂಟೆಯೊಳಗೆ ಬೇಯಿಸಿ ತೆಗೆದ ಅಡಕೆಯನ್ನು ಬಂಡೆಗಳ ಮೇಲಾಗಲೀ, ತಡಿಕೆಗಳ ಮೇಲಾಗಲೀ, ಸಾರಿಸಿದ ಚೊಕ್ಕಟ ಭೂಮಿಯ ಮೇಲಾಗಲೀ ಚೆನ್ನಾಗಿ ಒಣಗಿಸಿ ದಾಸ್ತಾನುಮಾಡುತ್ತಾರೆ. ಕೆಲವು ಕಡೆ ಮೆರಗಿರುವ ಚೊಗರಿನ ಅಡಕೆಗೆ ಬೇಡಿಕೆಯಿರುವುದರಿಂದ ಅಂತಹ ಸ್ಥಳಗಳಲ್ಲಿ ಮಾತ್ರ ಬೇಯಿಸಿದ ಅಡಕೆ ಅರ್ಧ ಒಣಗಿರುವಾಗ, ಕುದಿಸಿ ಸ್ವಲ್ಪ ಗಟ್ಟಿ ಯಾದ ಚೊಗರನ್ನು ಅದಕ್ಕೆ ಸೇರಿಸಿ, ಕಲೆಸಿ ಪುನಃ ಒಣಗಿಸು ತ್ತಾರೆ. ಇದರಿಂದ ಚೊಗರು ಅಡಕೆಗೆ ಅಂಟಿಕೊಂಡು ಕೆಂಪನೆಯ ಮೆರಗು ಕೊಟ್ಟಂತೆ ಆಗುತ್ತದೆ. ಇವೆಲ್ಲವೂ ಆಯಾ ಪ್ರದೇಶದ ಉಪಯೋಗಕ್ಕನುಗುಣವಾಗಿ ತಯಾರಾಗುತ್ತವೆ. ಹಾಗೆ ಬೇಯಿಸಿ ಒಣಗಿಸುವ ಕಾಲದಲ್ಲಿ ಒಳ್ಳೆಯ ಬಿಸಿಲು ಅತ್ಯಗತ್ಯ. ಅದಿಲ್ಲದಿದ್ದಲ್ಲಿ ಸ್ವಲ್ಪ ಬಣ್ಣ ಮಂಕಾಗಿ ಅದರ ಬೆಲೆ ಕಡಿಮೆಯಾಗುತ್ತದೆ.

ಸಕಾಲದಲ್ಲಿ ಕೊಯ್ದು ಮಾರುಕಟ್ಟೆಗನುಗುಣವಾಗಿ ತಯಾರಿಸುವುದು ರೈತರಿಗೆ ಲಾಭಕರ.

**ಉತ್ಪತ್ತಿ :** ಒಂದು ತೋಟದ ಉತ್ಪತ್ತಿಯು ಅನೇಕ ಅಂಶ ಗಳನ್ನನುಸರಿಸಿದೆ. ಮಣ್ಣಿನ ಗುಣ, ಗೊಬ್ಬರ ಮತ್ತು ಸಾಗುವಳಿ, ಮರಗಳ ವಯಸ್ಸು ಮತ್ತು ಸಾಂದ್ರತೆ, ನೀರಿನ ಸೌಲಭ್ಯ ಮತ್ತು ಚರಂಡಿಗಳ ವ್ಯವಸ್ಥೆ, ಮುದಿಮರಗಳ ಸಂಖ್ಯೆ, ರೋಗರುಜಿ ನಾದಿಗಳು, ಕಳೆಗಳ ದಟ್ಟಣೆ, ಮಳೆ ಮತ್ತು ತಯಾರಿಕೆಯ– ವೈವಿಧ್ಯ—ಇವುಗಳು ಇಳುವರಿಯ ಮೇಲೆ ಪರಿಣಾಮಕಾರಿ ಯಾಗುತ್ತವೆ.

ಗಿಡಗಳ ಸಾಂದ್ರತೆ ಬಹು ಮುಖ್ಯ. ಎಡದಾಯ ಅಥವಾ ಮರುನಾಟಿ ಮಾಡಿದ ಹಳೆಯ ತೋಟಗಳಲ್ಲಿ ಸುಮಾರು ೮೦೦

ರಿಂದ ೧೨೦೦ರವರೆಗೆ ಮರಗಳಿದ್ದು, ಅಂತಹ ಒಳ್ಳೆಯ ತೋ
ಗಳಲ್ಲಿ ಫಲ ಹೆಚ್ಚಾಗಿರುತ್ತದೆ. ಮಳೆ ವರ್ಷದಲ್ಲೆಲ್ಲಾ ಹ
ಹಿತಕರವಾಗಿ ಬಿದ್ದಲ್ಲಿ ಮತ್ತು ಮಳೆಯಿಲ್ಲದಾಗ ಸಾಕಾದಷ
ನೀರನ್ನು ಒದಗಿಸಿದಲ್ಲಿ, ಇಳುವರಿ ಕಮ್ಮಿಯಾಗುವುದಿಲ್ಲ. ಜೌ
ಪ್ರದೇಶಗಳಲ್ಲಿ ಮತ್ತು ನೀರು ಸಾಕಾಗದಿದ್ದಲ್ಲಿ ಕಾ
ಉದುರುವುದೂ, ಸಣ್ಣದಾಗಿ ಚೆನ್ನಾಗಿ ಬೆಳೆಯದಿರುವುದ
ಕಾಣಬರುತ್ತದೆ. ರೋಗಗಳಿಂದ ಬಹಳ ನಷ್ಟವಾಗಬಹುದು
ಮಲೆನಾಡಿನಲ್ಲಿ 'ಕೊಳೆರೋಗ'ದಿಂದ ಬಹಳ ನಷ್ಟವಾಗುತ್ತ
'ಅಣಬೆ', 'ಹಿಡಿಮುಂಡಿಗೆ' ರೋಗಗಳಿಂದ ಮರಗಳ
ಸತ್ತು, ಅವುಗಳ ಸಂಖ್ಯೆಗನುಗುಣವಾಗಿ ಇಳುವರಿ ಕ
ಯಾಗುತ್ತದೆ. ಬೇಸಿಗೆಯಲ್ಲಿ ಕೆಲವು ಪ್ರದೇಶಗಳಲ್ಲಿ 'ಹೇನಿ
ಉಪಟಳವು ಹೆಚ್ಚಿ, ಮುಂದೆ ಇಳುವರಿ ಕಮ್ಮಿಯಾಗಬಹುದು
ಇನ್ನೂ ಮುಖ್ಯವಾಗಿ ಇಳುವರಿಯು ಸಾಗುವಳಿ ಮತ್ತು
ಗೊಬ್ಬರದ ಸಾಕಷ್ಟು ಪೂರೈಕೆಗನುಗುಣವಾಗಿ ಹೆಚ್ಚುತ್ತದೆ
ಸಕಾಲದ ಸಾಗುವಳಿಯಿಂದಲೇ ಶೇಕಡಾ ೫ ರಿಂದ ೧೦ ಭಾ
ಇಳುವರಿ ಹೆಚ್ಚುವುದೆಂದು ಕಂಡುಬಂದಿದೆ. ಅದರ ಜೊತೆ
ಸಾಕಷ್ಟು ಸಾವಯುವ ಮತ್ತು ಕೃತಕ ಗೊಬ್ಬರವನ್ನೊದಗಿಸಿದಲ್ಲಿ
ಇದರಿಂದ ಇಳುವರಿ ಇನ್ನೂ ಹೆಚ್ಚುವುದು.

ಅಡಕೆಯ ಕೊಯ್ಲಿನ ಕಾಲವೂ ಅದರ ಇಳುವರಿಯ ಮೇಲೆ
ಪ್ರಭಾವ ಬೀರುತ್ತದೆ. ಹಣ್ಣಡಕೆ ಹೆಚ್ಚು ತೂಕದ್ದಾಗಿದ್ದು
ತೋಟದ ಇಳುವರಿಯನ್ನೂ ಹೆಚ್ಚಿಸುತ್ತದೆ. ಕಾಯಿಯನ್ನು
ಕೊಯ್ದು ಬೇಯಿಸಿ ಹದಗೊಳಿಸುವಾಗ ಅದರ ತೂಕ ಬಹ
ಕಡಿಮೆಯಾಗಿ ತೋಟದ ಒಟ್ಟು ಇಳುವರಿಯೂ ಕಡಿಮೆ
ಯಾಗುತ್ತದೆ. ಆದ್ದರಿಂದ ತೋಟದ ಒಟ್ಟು ಆದಾಯವನ್ನು
ಹೋಲಿಕೆಗೆ ಅನುಸರಿಸುವುದು ಸರಿಯಾದದ್ದು.

ತೋಟವಲ್ಲಿನ ಮರಗಳ ಸಾಂದ್ರತೆಯಲ್ಲಿ ಹೆಚ್ಚಿನ ವೈವಿಧ್ಯತೆ ಯಿದೆ. ಸಾಧಾರಣವಾಗಿ ಸಸಿಯಿಂದ ಸಸಿಗೆ ೬ ಅಡಿಯಿಂದ ೧೨ ಅಡಿಯವರೆಗಿನ ಅಂತರವನ್ನು ಕೊಡುವುದರಿಂದ, ಎಕರೆ ಒಂದಕ್ಕೆ ೩೦೦ರಿಂದ ೧,೨೦೦ ಗಿಡಗಳವರೆಗೂ ಇರುತ್ತವೆ. ಇವುಗಳಲ್ಲಿ ಎಲ್ಲಾ ಮರಗಳೂ ಫಲ ಕೊಡುವ ವಯಸ್ಸಿನ ವಾಗಿರವೆ ಕೆಲವು ಎಳೀ ಸಸಿಗಳೂ ಇರಬಹುದು. ಎಕರೆಗೆ ೫೦೦ ಫಲ ಕೊಡುವ ಗಿಡಗಳಿರುವುದು ಲಾಭದಾಯಕ ವಾಗಿದ್ದರೂ, ೫೦೦ರಿಂದ ೮೦೦ ಸಸಿಗಳವರೆಗೆ ಹೆಚ್ಚಿಸಿ ಚೆನ್ನಾಗಿ ಗೊಬ್ಬರ ಒದಗಿಸಿದಲ್ಲಿ ಮರಗಳ ಸಾಂದ್ರತೆಗನುಗುಣವಾಗಿ ಇಳುವರಿಯೂ ಹೆಚ್ಚುತ್ತದೆ. ಆದರೆ ಅದಕ್ಕಿಂತ ಹೆಚ್ಚಾಗಿದ್ದಲ್ಲಿ ಒಟ್ಟು ಇಳುವರಿಯಲ್ಲಿ ಹೆಚ್ಚೇನೂ ಕಂಡುಬರುವುದಿಲ್ಲ. ಗೊಬ್ಬರ ಮತ್ತು ನೀರಿನ ಪೂರೈಕೆಗನುಗುಣವಾಗಿ ಗಿಡ ಒಂದಕ್ಕೆ ೩ರಿಂದ ೪ ಗೊನೆಗಳೂ, ಗೊನೆಯಲ್ಲಿ ೧೫೦ರಿಂದ ಸುಮಾರು ೮೦೦ ಕಾಯಿಗಳೂ ಸಿಗುತ್ತವೆ. ತೀರಪ್ರದೇಶಗಳಲ್ಲಿ ಕಾಯಿಗಳು ದಪ್ಪವಾಗಿದ್ದು ಗೊನೆಯಲ್ಲಿನ ಸಂಖ್ಯೆ ಕಮ್ಮಿ ಇರುತ್ತದೆ. ಮಲೆನಾಡಿನಲ್ಲಿ ಕಾಯಿಗಳು ಸಣ್ಣಗಿದ್ದು ಗೊನೆಯಲ್ಲಿ ಹೆಚ್ಚಿನ ಸಂಖ್ಯೆ ಇರುತ್ತದೆ. ಮೈದಾನ ಪ್ರದೇಶದಲ್ಲಿ ಮಧ್ಯವರ್ತಿ ಕಾಯಿಗಳು ಸುಮಾರು ೨೦೦-೩೦೦ ಇರುತ್ತವೆ. ಆದರೆ ಅವುಗಳ ಒಟ್ಟು ಇಳುವರಿಯ ತೂಕ ಬಹುಶಃ ಒಂದೇ ರೀತಿಯ ವಾಗಿರುತ್ತವೆ.

'ಚಾಲಿ' ಅಥವಾ 'ಗೋಟಡಕೆ'ಯು ಮೈಸೂರಿನ ಕೆಲ ಭಾಗಗಳಲ್ಲಿ ಸರಾಸರಿಯಾಗಿ ಗಿಡ ಒಂದಕ್ಕೆ ೩ ಪೌಂಡಿನಷ್ಟು ಉತ್ಪತ್ತಿ ಸಿಗುತ್ತದೆ. ಹಣ್ಣಿನಿಂದ ಶೇಕಡಾ ೨೦-೨೨ ಭಾಗ ದಷ್ಟು ಚಾಲಿಯು ಉತ್ಪತ್ತಿಯಾಗುತ್ತದೆ. ಬೇಯಿಸಿದ ಅಡಕೆ,

ಗೋಟಡಿಕೆಯಷ್ಟು ತೂಕವನ್ನು ಕೊಡುವುದಿಲ್ಲ. ಸಾಮಾನ್ಯ
ವಾಗಿ ಗಿಡ ೧ಕ್ಕೆ ೨ ಪೌಂಡು ಅಡಕೆ ಬಂದಲ್ಲಿ ಅದು ಬಹು
ಒಳ್ಳೆಯ ಇಳುವರಿಯೆಂದು ಪರಿಗಣಿಸಲ್ಪಡುತ್ತದೆ.

**ಗುತ್ತಿಗೆ :** 'ಪಚ್ಚಿಮಾರು', 'ಗುತ್ತಿಗೆ', 'ಕೇಣಿ' ಎಂದ
ವಿವಿಧ ಪ್ರದೇಶಗಳಲ್ಲಿರುವ ಪದ್ಧತಿ, ತೋಟದ ಫಸಲನ್ನು
ಇನ್ನೊಬ್ಬರಿಗೆ ನಿಗದಿಯಾದ ಬೆಲೆಗೆ ವಹಿಸಿಕೊಡುವುದಕ್ಕಿರು
ಹೆಸರು. ಸಾಮಾನ್ಯವಾಗಿ ಗುತ್ತಿಗೆ ನಿಗದಿಯಾದಂದಿನಿಂ
ಫಸಲನ್ನು ಪೂರ್ತಿ ಕೊಯ್ದುಕೊಳ್ಳುವವರೆಗೂ ಗುತ್ತಿಗೇದಾರನ
ತೋಟದ ಕಾವಲು ಏರ್ಪಡಿಸಿಕೊಳ್ಳುತ್ತಾನೆ. ಇದು ಎಲ್ಲಿಲ್ಲ
ಆಯಾ ವರ್ಷದ ಅವಧಿಗೆ ಮಾತ್ರ ಏರ್ಪಡಿಸಿಕೊಳ್ಳುವುದಾದರು
ಮಲೆನಾಡಿನ ಕೆಲ ಭಾಗಗಳಲ್ಲಿ ಅನೇಕ ವರ್ಷಗಳಿಗೊಮ್ಮೆ
ನಿಗದಿಮಾಡಿಕೊಳ್ಳುವುದುಂಟು. ಗುತ್ತಿಗೆಯಲ್ಲಿಯೂ ಅನೇಕ
ವಿಧಗಳಿವೆ. ಗೋಟಿಗಾಗಿ ಹಣ್ಣಡಕೆ ಮಾರುವ ಕೆಲ ಪ್ರದೇಶ
ಗಳಲ್ಲಿ ದರವು ಒಂದು ಸಾವಿರ ಅಥವಾ ಲಕ್ಷ ಹಣ್ಣಡಕೆಗೆ ನಿಗದಿ
ಯಾಗಿರುತ್ತದೆ. ಕಾವಲೆಲ್ಲವೂ ತೋಟಗಾರನೇ ಏರ್ಪಡಿಸಿದ
ಕೊಯ್ಲಾದಾಗ ಅಡಕೆಯನ್ನು ಎಣಿಸಿ ಮೊದಲೇ ನಿಗದಿಯಾದ
ಬೆಲೆಗೆ ಕೊಡುತ್ತಾನೆ. ಬಹುವಾರ್ಷಿಕ ಗುತ್ತಿಗೆಯಲ್ಲಿ ತೋಟಕ್ಕೆ
ಗುತ್ತಿಗೆದಾರನು ಮಾಡಬೇಕಾದ ಸಾಗುವಳಿಯ ಕ್ರಮಗಳೆಲ್ಲ
ವನ್ನೂ ನಿರೂಪಿಸಿ, ಜೊತೆಗೆ ವರ್ಷಕ್ಕೆ ತೋಟದ ಒಡೆಯನಿಗೆ
ಎಕರೆಗೆ ಇಷ್ಟು ಹಣ ಅಥವಾ ಅಡಕೆ ಸಲ್ಲಬೇಕೆಂದು ಏಪಾ
ಡಾಗುತ್ತದೆ. ಉಪಬೆಳೆಗಳಿರುವ ಅನೇಕ ಪ್ರದೇಶಗಳಲ್ಲಿ ತೋಟ
ವನ್ನು ಸಣ್ಣ ಸಣ್ಣ 'ಪಟ'ಗಳನ್ನಾಗಿ ವಿಂಗಡಿಸಿ ಬೇರೆ ಬೇರೆ
ಯವರಿಗೆ ಗುತ್ತಿಗೆ ಕೊಡುತ್ತಾರೆ. ಗುತ್ತಿಗೆದಾರನು ತೋಟದ
ಎಲ್ಲಾ ವ್ಯವಸಾಯವನ್ನೂ ಮಾಡಿಸಿ, ಕಂದಾಯವನ್ನು

ಸಲ್ಲಿಸಬೇಕು. ಜೊತೆಗೆ ತೋಟದಿಂದ ಯಜಮಾನನ ಮನೆಗೆ ಬೇಕಾದ ಎಲೆ ಮತ್ತು ಹಣ್ಣನ್ನು ಕೊಡಬೇಕು. ತೋಟದ ಪೂರ್ತ ಅಡಕೆ ಮತ್ತು ತೆಂಗು ಯಜಮಾನನ ಪಾಲು. ಗುತ್ತಿಗೆದಾರನಿಗೆ ತೋಟದಲ್ಲಿನ ಎಲ್ಲಾ ಬಾಳೆ ವೀಳೇದೆಲೆ ಮೊದಲಾದ ಉಪಬೆಳೆಗಳ ಪೂರ್ತ ಉತ್ಪತ್ತಿ ಮತ್ತು ಅವನು ಚುನಾಯಿಸಿದ ೨-೩ ಅಡಕೆ ಮರಗಳ ಪೂರ್ತ ಇಳುವರಿ ಅವನ ಉಪಯೋಗಕ್ಕಾಗಿ ಕೊಡಲಾಗುತ್ತದೆ. ಮೈದಾನದ ಬೇರೆ ಎಲ್ಲಾ ಪ್ರದೇಶಗಳಲ್ಲೂ ಗುತ್ತಿಗೆಯನ್ನು ಆಯಾ ವರ್ಷದ ಫಸಲಿನ ಅಂದಾಜಿನ ಮೇಲೆ ನಿಗದಿ ಮಾಡಲಾಗುತ್ತದೆ. ೧೦೦ ಗೊನೆಗೆ ೨ರಿಂದ ೪ ಮಣಗಳವರೆಗೂ ಇಳುವರಿಯನ್ನು ನಿರೀಕ್ಷಿಸಿ ತೋಟದ ಒಟ್ಟು ಇಳುವರಿಯನ್ನು ಅಂದಾಜುಮಾಡಲಾಗುವುದು. ಇದಕ್ಕೆ ಸಾಮಾನ್ಯವಾಗಿ ಮಣಕ್ಕೆ ೪೦ರಿಂದ ೫೫ ರೂಪಾಯಿಗಳ ಬೆಲೆ ಕಟ್ಟಿ ತೋಟದ ಒಟ್ಟು ಗುತ್ತಿಗೆ ನಿಗದಿಯಾಗುತ್ತದೆ. ಅಂತೂ ಇದರಿಂದ ತೋಟದ ಮಾಲೀಕನಿಗೆ ಉತ್ಪತ್ತಿಯನ್ನು ಅಳವಡಿಸುವ ತೊಂದರೆ ತಪ್ಪಿ, ಗುತ್ತಿಗೆದಾರನಿಗೆ ಲಾಭ ದೊರಕುವುದರಿಂದ ಇಬ್ಬರಿಗೂ ಅನುಕೂಲವಾಗಿ ಪರಿಣಮಿಸುತ್ತದೆ.

**ಅಡಕೆಯ ಉಪಯುಕ್ತತೆ ಮತ್ತು ಉಪವಸ್ತುಗಳ ಉತ್ಪತ್ತಿ :** ಭಾರತದಲ್ಲಿ ವೇದಗಳ ಕಾಲದಿಂದಲೂ ತಾಂಬೂಲ ಸೇವನೆಯಲ್ಲಿ ಅಡಕೆಯು ಮುಖ್ಯವಾಗಿತ್ತೆಂದು ಕಂಡುಬಂದಿದೆ. ಹಣ್ಣು, ಒಳಗಿನ ಅಡಿಕೆ ಮತ್ತು ಅದರ ಮೇಲಿನ ನಾರಿನಿಂದ ಕೂಡಿದೆ. ಅಡಕೆಯಲ್ಲಿ ಶರ್ಕರಪಿಷ್ಟಾದಿಗಳು, ಸಸಾರಜನಕ, ಮೇದಸ್ಸು, ಟ್ಯಾನಿನ್ ಮತ್ತು ಸಸ್ಯಕ್ಷಾರವಿದ್ದು, ಜೊತೆಗೆ ಸುಣ್ಣ, ರಂಜಕ ಮತ್ತು ಕಬ್ಬಿಣದಂಶಗಳೂ ಇವೆ. ಇವರ ಬಳಕೆಯು ವಸಡನ್ನು ಗಟ್ಟಿಯಾಗಿಸಿ, ಜೀರ್ಣಶಕ್ತಿಯನ್ನು

ಹೆಚ್ಚಿಸುತ್ತದೆ. ಅದರಲ್ಲಿನ ಸಸ್ಯಕ್ಷಾರವು ಹೊಟ್ಟೆಯೊಳಗಿ ಜಂತುಹುಳುಗಳನ್ನು ಹೋಗಲಾಡಿಸಬಲ್ಲವು. ಅಡಕೆಯನ್ ಚೆನ್ನಾಗಿ ಪುಡಿಮಾಡಿ ಅಥವಾ ಸುಟ್ಟು ಪುಡಿಮಾಡಿ ಹಲ್ಲುಜ್ಜಲೂ ಮತ್ತು ಜಂತುಹುಳುಗಳನ್ನು ಹೋಗಲಾಡಿಸಲು ಉ ಯೋಗಿಸಬಹುದು. ಅದು ಹೃದಯದಲ್ಲಿನ ಕಫವನ್ನು ತೆ ಯಲೂ, ಆಮಶಂಕೆ ನಿಲ್ಲಿಸಲೂ, ಪಚನವನ್ನು ಹೆಚ್ಚಿಸಲೂ ಹೊಟ್ಟೆಯುಬ್ಬರ ಮತ್ತು ಪಿತ್ತವನ್ನು ಕಡಿಮೆಮಾಡಲೂ ಮತ್ತ ದಂತಪಂಕ್ತಿಯನ್ನು ಗಟ್ಟಿಯಾಗಿಡಲೂ ಸಹಕಾರಿಯಾಗುತ್ತದೆ ಆದರೆ ಎಳೇ ಅಡಕೆಯನ್ನಾಗಲೀ ಅಥವಾ ಹೆಚ್ಚಾಗಿ ಅಡ ಯನ್ನಾಗಲೀ ತಿಂದಲ್ಲಿ, ಬೆವರು ಹೆಚ್ಚಿ, ಮೂತ್ರರೋಗವ ನರಗಳ ದೌರ್ಬಲ್ಯವೂ ಹೆಚ್ಚಬಹುದೆಂದು ತಿಳಿಯುತ್ತದೆ.

ಅಡಕೆ ಸಿಪ್ಪೆಯಲ್ಲಿ ಅನೇಕ ಗಟ್ಟಿಯಾದ ಎಳೆಗಳಿರುತ್ತವೆ ಇದರಿಂದ ಅವು ಬೇಗ ಕೊಳೆತುಹೋಗುವುದಿಲ್ಲ. ಗೊಬ್ಬ ಮಾಡಲು ಇದೊಂದು ಅನಾನುಕೂಲ. ಅದನ್ನು ಈ ಬಹುವಾಗಿ ಒಲೆ ಉರಿಸಲು ಉಪಯೋಗಿಸುತ್ತಾರೆ. ಇದ ಒಂದು ಒಳ್ಳೆಯ ಬೆಲೆಯಾದ ವಸ್ತುವಿನ ದುರುಪಯೋಗವೆ ಸರಿ. ಇದರಲ್ಲಿ ಸಾರಜನಕ, ರಂಜಕ ಮತ್ತು ಪೊಟಾಷ ಇರುವುದರಿಂದ ತೋಟದಲ್ಲಿ ಹರಡಿ ಅಗೆದುಬಿಟ್ಟಲ್ಲಿ, ಆ ಸಾ ವನ್ನು ಒದಗಿಸುವುದಲ್ಲದೆ, ಭೂಮಿಯಲ್ಲಿ ಹೆಚ್ಚು ತೇವ ನಿಲ್ಲಲ ಸಹಕಾರಿಯಾಗುತ್ತದೆ. ಇದರಲ್ಲಿರುವ ಗಟ್ಟಿ ಎಳೆಗಳನ್ನ ಹಲ್ಲುಜ್ಜುವ ಬ್ರಷ್‌ಗಳನ್ನು ಮಾಡಲು ಉಪಯೋಗಿಸಬಹುದ ಇವುಗಳಿಂದ ಒಳ್ಳೆಯ ದಪ್ಪದಾದ ರಟ್ಟುಗಳನ್ನೂ ತಯಾರಿ ಬಹುದು.

ಇದರ ಎಲೆಗಳೂ ಉಪಯುಕ್ತವಾದವು. ಪ್ರತಿ ಮರದಲ್ಲ

ರ್ಷ ಒಂದಕ್ಕೆ ೫–೬ ಎಲೆಗಳು ಉದುರುತ್ತವೆ. ಅವುಗಳಲ್ಲೂ
ೊಬ್ಬರದ ಅಂಶಗಳು ಹೆಚ್ಚಾಗಿರುವುದರಿಂದ, ಅಲ್ಲಲ್ಲಿ ಸಣ್ಣ
ಣ್ಣ ಕಡಗುಗಳನ್ನು ತೆಗೆದು, ಅವನ್ನು ತುಂಬಿ ಮುಚ್ಚುವುದರಿಂದ
ೋಟಕ್ಕೆ ಬಹಳ ಅನುಕೂಲವಾಗುತ್ತದೆ. ಬೇಸಿಗೆಯಲ್ಲಿ
ಿದ್ದ ಎಲೆಗಳನ್ನು ತೋಟದಲ್ಲೇ ಬಿಟ್ಟಲ್ಲಿ ಭೂಮಿಯಲ್ಲಿನ
ೇವವು ಬೇಗ ಆರದಂತೆ ತಡೆಗಟ್ಟುತ್ತವೆ. ಎಲೆಯ ಪಟ್ಟೆಯು
ಅಗಲವಾಗಿದ್ದು, ಅನೇಕ ವಿಧದಲ್ಲಿ ಉಪಯೋಗಿಸಲು ಅನುಕೂಲ
ವಾಗಿದೆ. ಊಟದ ಎಲೆಯಾಗಿ ಅದು ಸಾಮಾನ್ಯ ಬಳಕೆ
ಯಲ್ಲಿದೆ. ಬಿಸಿಲು ಟೋಪಿ, ಬೀಸಣಿಗೆ ಮತ್ತು ನೀರು ಸೇದಲು
ಉಪಯೋಗಿಸಬಹುದು. ಇದನ್ನು ಸಣ್ಣ ಚೂರುಗಳಾಗಿ
ಕತ್ತರಿಸಿ ಉಪ್ಪು ನೀರನ್ನು ಚಿಮುಕಿಸಿ ಒಣಗಿಸಿಟ್ಟಲ್ಲಿ ದನ
ಗಳಿಗೆ ಒಳ್ಳೇ ಆಹಾರವಾಗುತ್ತದೆ.

ಅಡಕೆಯ ಮರದ ಕಾಂಡವು ಬಹು ಉಪಯುಕ್ತವಾದುದು.
ಕಾಂಡಗಳನ್ನು ಚಪ್ಪರ ಹಾಕಲು ಎಲ್ಲೆಲ್ಲೂ ಉಪಯೋಗಿಸು
ತ್ತಾರೆ. ಅದನ್ನು ದಪ್ಪವಾಗಿ ಸೀಳಿ ಮನೆ ಮಾಡಿಗೆ ತೀರುಗಳಾಗಿ
ಉಪಯೋಗಿಸುತ್ತಾರೆ. ಅದು ಗಟ್ಟಿಯಾಗಿ ಬಹುಕಾಲ ಬಾಳಿಕೆ
ಬರುತ್ತದೆ. ಅದರ ದಿಬ್ಬೆಗಳಿಂದ ತಟ್ಟಿ ಹೆಣೆಯಬಹುದು.
ಕಾಂಡವು ಗಟ್ಟಿಯಾಗಿ ಅದರಿಂದ ಮಾಡಿದ ಸಾಮಾನುಗಳು
ಒಳ್ಳೆಯ ಬಣ್ಣದ್ದಾಗಿರುವುದರಿಂದ, ಸಾಧಾರಣ ಉಪಯೋಗಕ್ಕೆ
ಬೇಕಾದ ಕಸದ ಬುಟ್ಟಿ, ಸ್ಕೇಲು, ರೂಲರ್, ವಾಕಿಂಗ್ ಸ್ಟಿಕ್
ಮುಂತಾದವುಗಳನ್ನು ತಯಾರಿಸಬಹುದು. ಇದನ್ನು ಒಂದು
ಸಣ್ಣ ಕೈಗಾರಿಕೆಯಾಗಿ ಮಾಡಿದಲ್ಲಿ ಅದಕ್ಕೆ ಅಧಿಕ ಲಾಭವಿದೆ.
೩–೪ ಅಡಿ ಉದ್ದನೆಯ ಕಾಂಡದ ಒಳಭಾಗವನ್ನು ತೆಗೆದು,
ಟಾರು ಹಚ್ಚಿ ಅದನ್ನು ನೀರು ಕೊಳವೆಗಳಾಗಿ ಉಪಯೋಗಿಸ

ಬಹುದು. ಕಬ್ಬಿಣದ ಕೊಳವೆಯಂತೆಯೇ ಅದು ದೀರ್ಘಕಾ
ಕೆಲಸಕ್ಕೆ ಉಪಯೋಗವಾಗುತ್ತದೆ.

ಅಡಕೆಯ ಸಿಂಗಾರವನ್ನು ಮದುವೆಗಳಲ್ಲೂ ಸತ್ಕಾಗಲ
ಉಪಯೋಗಿಸುತ್ತಾರಾಗಿ, ಅದಕ್ಕೆ ಹೆಚ್ಚಿನ ಮಹತ್ವವಿದ
ತೀರಪ್ರದೇಶಗಳಲ್ಲಿ ಅದರ ಸುವಾಸನೆಗಾಗಿ ಅದನ್ನು ಹೆಂಗಸ
ಮುಡಿದುಕೊಳ್ಳುವುದುಂಟು. ಅಡಕೆ ಬೇಯಿಸಿದ ಚೊಗರಿನಿಂ
ಚರ್ಮವನ್ನು ಚೆನ್ನಾಗಿ ಹದಮಾಡಬಹುದು. ಈಗ ಅದನ
ಚೆಲ್ಲುತ್ತಿರುವುದು ಒಂದು ಒಳ್ಳೆಯ ವಸ್ತುವು ವ್ಯರ್ಥವಾದಂ
ಆದ್ದರಿಂದ ಅವನ್ನು ಚೆನ್ನಾಗಿ ಗಟ್ಟಿಯಾಗುವವರೆಗೂ ಕಾಯಿ
ಒಣಗಿಸಿ ತೆಗೆದಿಟ್ಟಲ್ಲಿ ಹದಮಾಡಲು ಉಪಕಾರಿಯಾಗುವುದು
ಈ ಚೊಗರಿನಿಂದ ಬಟ್ಟೆ ಮತ್ತು ನೂಲಿಗೆ ಬಣ್ಣ ಕೊಡಲ
ಬರುವಂಥ ಒಂದು ಕೆಂಪು ಬಣ್ಣವನ್ನು ತಯಾರಿಸಬಹುದು
ಒಳ್ಳೆಯ ಶಾಯಿಯನ್ನೂ ಇದರಿಂದ ತಯಾರಿಸಲು ಸಾಧ್ಯವಿದ

ಹೀಗೆ ಅಡಕೆಯ ಮರವನ್ನು "ಕಲ್ಪತರು" ವೃಕ್ಷವೆಂದ
ಪರಿಗಣಿಸಬಹುದು. ಅದರ ಎಲ್ಲಾ ಭಾಗಗಳೂ ಉಪಯು
ವಾದವು. ಆದರೆ ಈಗ ಅವುಗಳ ಸರಿಯಾದ ಬಳಕೆಯಿಲ್ಲ
ಅವನ್ನು ಸರಿಯಾದ ರೀತಿಯಲ್ಲಿ ಬಳಸುವ ಏರ್ಪಾಡು ಅತ್ಯಗತ್ಯ
ಅದರಿಂದ ವಸ್ತುವಿನ ಸರಿಯಾದ ಬಳಕೆಯಾಗುವುದಲ್ಲ
ಆದಾಯ ಹೆಚ್ಚುತ್ತದೆ.

**ಅಡಕೆ ಮಾರಾಟ :** ರೈತನಿಗೆ ಬೇಕಾದ ನಿಜವಾ
ಉತ್ತೇಜನ, ಅವನ ಶ್ರಮಕ್ಕೆ ತಕ್ಕ ಫಲ. ಫಲ ಎರಡು ಹ
ದಲ್ಲಿರುತ್ತದೆ. ಉತ್ಕೃಷ್ಟ ಬೆಳೆ, ಆ ಬೆಳೆಗೆ ತಕ್ಕಂಥ ಬೆಲೆ. ಇ
ದೊರಕದಿದ್ದಲ್ಲಿ ರೈತ ನಿರುತ್ಸಾಹಿಯಾಗುತ್ತಾನೆ. ಬೆಳೆಗೆ ಬೇಕಾ
ಅನುಕೂಲಗಳನ್ನು ಸಕಾಲದಲ್ಲಿ ಒದಗಿಸುವುದರಿಂದ ರೈತನ

ಒಳ್ಳೆಯ ಬೆಳೆ ತೆಗೆಯುವ ಶಕ್ತಿಯಿದೆ. ಅದನ್ನವನು ಉಪಯೋಗಿಸುತ್ತಾನೆ. ಆದರೆ ಅವನ ಬೆಳೆಗೆ ತಕ್ಕಂಥ ಬೆಲೆ ಒದಗಿಸುವುದು ಮುಖ್ಯವಾಗಿ ಸರ್ಕಾರದ ಕರ್ತವ್ಯ. ರೈತನಿಗೆ ಬೆಳೆಯ ಅನೇಕ ಪೂರೈಕೆಗಳನ್ನು ಒದಗಿಸಲು, ಆಗಾಗ್ಗೆ ಹಣದ ಆವಶ್ಯಕತೆಯಿರುತ್ತದೆ. ಇದಕ್ಕಾಗಿ ಅವನು ಋಣವಂತನಾಗುತ್ತಾನೆ. ಇದರಿಂದ ಮುಕ್ತನಾಗಲು ಬೆಳೆ ಕೈಗೆ ಬಂದೊಡನೇ ಮಾರಿ ಹಣ ಪಡೆಯಲು ಕಾತುರನಾಗುವುದು ಸಹಜ. ಈ ಸನ್ನಿವೇಶಗಳನ್ನು ಚೆನ್ನಾಗಿ ಅರಿತು ಬಂಡವಾಳಶಾಹಿಗಳೂ, ಸಾಗಾಣಿಕೆಗಾರರೂ ಮತ್ತು ದಳ್ಳಾಳಿಗಳೂ ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ. ರೈತನ ಉತ್ಪತ್ತಿಯ ಬಹುಭಾಗ ಇವರ ಪಾಲಾಗುತ್ತದೆ. ಈ ತೊಡಕು ನೀಗಬೇಕಾದಲ್ಲಿ ಅವರಿಗೆ ಸಕಾಲದಲ್ಲಿ ಬೇಕಾದಾಗ ಸುಲಭ ಬಡ್ಡಿ ದರದಲ್ಲಿ ಹಣ ಸಿಗುವಂತೆ ಏರ್ಪಾಡಾಗಬೇಕು ಮತ್ತು ಅವರ ಬೆಳೆಯನ್ನು ಕೊಂಡು ಸಾಧ್ಯವಾದಷ್ಟು ಹೆಚ್ಚಿನ ಧಾರಣೆಗೆ ಮಾರಿ ಅವರಿಗೆ ಅಧಿಕ ಲಾಭ ಒದಗಿಸುವ ಏರ್ಪಾಡಾಗಬೇಕು.

ಇದನ್ನು ಚೆನ್ನಾಗಿ ಮನಗಂಡು ಅಲ್ಲಲ್ಲಿ ಸಹಕಾರ ಸಂಘಗಳ ಸ್ಥಾಪನೆಯಾಗಿದೆ. ಈಗ ಶಿವಮೊಗ್ಗ, ಸಾಗರ, ಹೊನ್ನಾವರ, ಶಿರಶಿ, ಸಿದ್ದಾಪುರ, ಮಂಗಳೂರು, ತುಮಕೂರು ಮತ್ತು ಅರಕಲಗೂಡಿನಲ್ಲಿ ಅಡಕೆ ಮಾರಾಟದ ಸಹಕಾರ ಸಂಘಗಳು ಏರ್ಪಾಟಾಗಿವೆ. ಇದರಿಂದ ಅಡಕೆಗೆ ಒಂದು ನಿರ್ಧರ ಬೆಲೆ ಸಿಗುವಂತಾಗಿ, ಅದರ ವ್ಯಾಪಾರದಲ್ಲಿದ್ದ ನ್ಯೂನತೆಗಳು ಕಮ್ಮಿಯಾಗುತ್ತಿವೆ. ದಾಸ್ತಾನಿನ ಆಧಾರದಮೇಲೆ ಮುಂಗಡ ಹಣ ಕೊಡುವ ಏರ್ಪಾಡಾಗಿರುವುದರಿಂದ, ರೈತರಿಗೆ ಅತ್ಯಾವಶ್ಯಕವಾಗಿ ಬೇಕಾಗುವ ಖರ್ಚಿಗೆ ಕೂಡಲೇ ಹಣ ದೊರಕುವುದಲ್ಲದೆ,

ಅಡಕೆಯನ್ನು ಒಳ್ಳೆಯ ಬೆಲೆ ದೊರಕುವವರೆಗೂ ದಾಸ್ತಾನು ಮಾಡಲು ಅನುಕೂಲವಾಗಿದೆ. ಇದರ ಜೊತೆಗೆ ಶಿರ್ಶಿ ಸಹಕಾರಿ ಸಂಘದಲ್ಲಿ ಬೆಳೆಯ ಅಂದಾಜಿನ ಮತ್ತು ಆಧಾರದ ಮೇಲೆಯೂ ಸಾಲಕೊಡುವ ಏರ್ಪಾಡಿರುವುದರಿಂದ, ರೈತರು ತಮ್ಮ ಬೇಸಾಯದ ಪೂರೈಕೆಗಾಗಿ ಹೆಚ್ಚಿನ ಬಡ್ಡಿ ದರದಲ್ಲಿ ಸಾಲ ತೆಗೆದು ಕೊಳ್ಳುವುದು ಬಹಳ ಕಡಿಮೆಯಾಗಿದೆ. ಈ ಅನುಕೂಲವನ್ನು ಎಲ್ಲಾ ಅಡಿಕೆ ಬೆಳೆಯ ಕೇಂದ್ರಗಳಲ್ಲೂ ಏರ್ಪಡಿಸಬೇಕು.

ಮಂಗಳೂರು, ಶಿವಮೊಗ್ಗ, ಶಿರಶಿ ಮುಂತಾದ ಬಹು ಕಾಲದಿಂದ ನಡೆಯುತ್ತಿರುವ ಸಂಘಗಳಲ್ಲಿ ರೈತರ ತೋಟದಿಂದಲೇ ನೇರವಾಗಿ ಅವರ ದಾಸ್ತಾನನ್ನು ಶೇಖರಿಸಿ, ತರಿಸಿಕೊಳ್ಳುವಹಾಗೆಯೇ ಅವರಿಗೆ ಬೇಕಾದ ಎಲ್ಲಾ ಸಾಮಾನುಗಳನ್ನು ಅವರ ಸ್ಥಳಕ್ಕೆ ಒದಗಿಸುವ ಏರ್ಪಾಡೂ ಆಗಿದ್ದು ರೈತರಿಗೂ ಬಹಳ ಸಹಕಾರಿಯಾಗಿದೆ. ಈ ಸೌಲಭ್ಯ ಎಲ್ಲಾ ಸಂಘಗಳಿಂದ ಎಲ್ಲಾ ಅಡಕೆ ಬೆಳೆಗಾರರಿಗೂ ಸಿಗುವಂತಾಗಬೇಕು.

WO 2717—MUPM—3000—9-4-65

# ಮೈಸೂರು ವಿಶ್ವವಿದ್ಯಾನಿಲಯ
# ಪ್ರಚಾರ ಪುಸ್ತಕಮಾಲೆ

೧ ಖಗೋಳಶಾಸ್ತ್ರ ಪ್ರವೇಶ
—ಡಾ॥ ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೨ ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್
೩ ತೆರಿಗೆ—ಬಿ. ಆರ್. ಸುಬ್ಬರಾವ್
೪ ನವರತ್ನಗಳು—ಎಚ್. ಸುಬ್ಬಾಜೋಯಿಸ್
೫ ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ
೬ ಕುಮಾರವ್ಯಾಸ—ಎಸ್. ವಿ. ರಂಗಣ್ಣ
೭ ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೮ ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೯ ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್
೧೦ ಪಂಪ—ತೀ. ನಂ. ಶ್ರೀಕಂಠಯ್ಯ
೧೧ ಪ್ರಾಣಿಜೀವನ—ಎ. ನಾರಾಯಣರಾವ್
೧೨ ಕನಸುಗಳು—ಡಾ॥ ಎನ್. ಎಸ್. ನಾರಾಯಣಶಾಸ್ತ್ರೀ
೧೩ ಮದುವೆ—ನಾ. ಕಸ್ತೂರಿ
೧೪ ನಮ್ಮ ಆರ್ಥಿಕದೃಷ್ಟಿ—ಎಸ್. ಗೋಪಾಲಸ್ವಾಮಿ
೧೫ ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್
೧೬ ಬೆಳಕು—ಟಿ. ಎಸ್. ಸುಬ್ಬರಾಯ
೧೭ ಕರ್ನಾಟಕ ಕಾದಂಬರಿ—ವಿ. ಸೀತಾರಾಮಯ್ಯ
೧೮ ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೧೯ ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್
೨೦ ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ
೨೧ ಸಾರ್ವಜನಿಕ ವೆಚ್ಚ—ಡಾ॥ ಎಂ. ಎಚ್. ಗೋಪಾಲ್
೨೨ ಶಿಶುವಿಹಾರಗಳು—ಸಿ. ರಂಗಾಚಾರ್
೨೩ ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರೀ
೨೪ ವಿಡಂಬನ—ಎಸ್. ವಿ. ರಂಗಣ್ಣ
೨೫ ಎಲ್ಲೋರ ಮತ್ತು ಅಜಂತ—ಡಾ॥ ಎಂ. ಎಚ್. ಕೃಷ್ಣ

೨೬ ಸಾರಜನಕದ ಮಹತ್ವ—ಎಚ್. ಸುಬ್ಬಾಜೋಯಿಸ್
೨೭ ಭಾಸ—ಡಾ|| ಎಚ್. ಎಲ್. ಹರಿಯಪ್ಪ
೨೮ ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ
೨೯ ಸರ್ವಜ್ಞ ಕವಿ—ಎ. ಆರ್. ಕೃಷ್ಣಶಾಸ್ತ್ರೀ
೩೦ ರಕ್ತ—ಡಿ. ಶಾಮಣ್ಣ
೩೧ ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೩೨ ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೩೩ ಗಣಿತಶಾಸ್ತ್ರದ ಸ್ವರೂಪ
—ಡಾ|| ಸಿ. ಎನ್. ಶ್ರೀನಿವಾಸ ಅಯ್ಯಂಗಾರ್
೩೪ ಋಗ್ವೇದ—ಎಂ. ಎ. ಕೃಷ್ಣಸ್ವಾಮಿ
೩೫ ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೩೬ ಆಳ್ವಾರುಗಳು—ಎಂ. ಯಾಮುನಾಚಾರ್ಯ
೩೭ ಹಿಂದು ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು
—ವಿ. ರಾಘವೇಂದ್ರರಾವ್
೩೮ ಸುಭಾಷಿತ ಸಂಗ್ರಹಗಳು—ಎಂ. ಪಿ. ಲಕ್ಷ್ಮೀನರಸಿಂಹಶಾಸ್ತ್ರೀ
೩೯ ಮಕ್ಕಳ ಭಾವಜೀವನ—ಡಾ|| ಬಿ. ಕುಪ್ಪುಸ್ವಾಮಿನಾಯಿಡು
೪೦ ಸಹಕಾರ—ಎಸ್. ಗೋಪಾಲಸ್ವಾಮಿ
೪೧ ನಯಸೇನ—ಜಿ. ವೆಂಕಟಸುಬ್ಬಯ್ಯ
೪೨ ಕೌಟಲ್ಯ—ಡಾ|| ಎಂ. ವಿ. ಕೃಷ್ಣರಾವ್
೪೩ ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೪೪ ಮುನಿಸಿಪಾಲಿಟಿಗಳು—ಎಚ್. ಕೃಷ್ಣರಾವ್
೪೫ ಲಕ್ಷ್ಮೀಶ—ಎನ್. ಅನಂತರಂಗಾಚಾರ್
೪೬ ರುಚಿ—ಎಸ್. ವಿ. ರಂಗಣ್ಣ
೪೭ ಕೀಟಗಳು—ಡಿ. ಎಸ್. ವೀರಯ್ಯ
೪೮ ಅಲೆಗಳು—ಕೆ. ಶೇಷಾದ್ರಿ ಅಯ್ಯಂಗಾರ್
೪೯ ಮುದ್ರಣ—ಟಿ. ಎಸ್. ಶಾಮರಾವ್
೫೦ ಐವರು ಭೌತ ವೈಜ್ಞಾನಿಕರು—ಬಿ. ಎ. ಕೃಷ್ಣಸ್ವಾಮಿರಾವ್
೫೧ ಕೃತಕರೇಷ್ಮೆ—ಎಂ. ಷಡಕ್ಷರಸ್ವಾಮಿ
೫೨ ಚೀನರ ಇತಿಹಾಸ ಮತ್ತು ನಾಗರಿಕತೆ
—ಎಸ್. ವೆಂಕಟದೇಶಿಕಾಚಾರ್

೫೩ ಯುದ್ಧಕಾಲದ ಆರ್ಥಿಕ ಸಮಸ್ಯೆಗಳು
—ಎಸ್. ಲಕ್ಷ್ಮೀನರಸಿಂಹನ್

೫೪ ಆಹಾರ—ಜೆ. ಆರ್. ಲಕ್ಷ್ಮಣರಾವ್.

೫೫ ಇಬ್ಸನ್ನಿನ ಕೆಲವು ನಾಟಕಗಳು—ಎಸ್. ಮಂಜುನಾಥ್

೫೬ ಶಬ್ದಪ್ರಪಂಚ—ಆರ್. ಎಲ್. ನರಸಿಂಹಯ್ಯ

೫೭ ಪ್ರಜಾಭಿಪ್ರಾಯ—ಟಿ.ಎಸ್. ರಾಜಗೋಪಾಲ ಅಯ್ಯಂಗಾರ್

೫೮ ಕಲ್ಲಿದ್ದಲು—ಕೆ. ಎಸ್. ಲಕ್ಷ್ಮಣರಾವ್

೫೯ ಜನಪದಮುಕ್ತಕಗಳು-ಎಚ್.ಎಂ. ಶಂಕರನಾರಾಯಣರಾವ್

೬೦ ಹಾಲು—ಕೆ. ಎಸ್. ಲಕ್ಷ್ಮಣರಾವ್

೬೧ ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ

೬೨ ಭಾರತದಲ್ಲಿ ಪ್ರಜಾಪ್ರಭುತ್ವ
—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್

೬೩ ಆರೋಗ್ಯಸಾಧನೆ—ಸೋಟಗಾನಹಳ್ಳಿ ಮಹದೇವಶಾಸ್ತ್ರೀ

೬೪-೬೫ ಆಧುನಿಕ ಭಾರತದಲ್ಲಿ ನೃತ್ಯಕಲೆ—ಯು. ಎಸ್. ಕೃಷ್ಣರಾವ್
ಮತ್ತು ಚಂದ್ರಭಾಗಾದೇವಿ

ಸಾದಾ ಪ್ರತಿ ೫೦ ಪೈಸೆ ; ಉತ್ತಮ ಪ್ರತಿ ೭೫ ಪೈಸೆ

೬೬ ಚುನಾವಣೆಗಳು—ಗ. ಸ. ಹಾಲಪ್ಪ

೬೭ ಮೀನಿನಿಂದ ಮಾನವನೆಡೆಗೆ—ಎಚ್. ಬಿ. ದೇವರಾಜ ಸರ್ಕಾರ್

೬೮ ಕ್ಷಯ—ಡಾ|| ಎಸ್. ಟಿ. ಪುಟ್ಟಣ್ಣ

೬೯ ಶಿಲ್ಪಿಯ ಪಾತ್ರ—ಬಿ. ಎಲ್. ಸಿ. ರಾಜನ್

೭೦ ಪರತಂತ್ರ ಜೀವಿಗಳು ಮತ್ತು ಪರತಂತ್ರ ಜೀವನ
—ಎಚ್. ಬಿ. ದೇವರಾಜ ಸರ್ಕಾರ್

೭೧ ಮಾನವ ಹಕ್ಕುಗಳು—ಹೆಚ್. ಎಂ. ಸದಾಶಿವಯ್ಯ

೭೨ ವಿನೋದ ಗಣಿತ—ವಿ. ಕೆ. ದೊರೆಸ್ವಾಮಿ

೭೩ ಸಾಬೂನು—ಕೆ. ಎಸ್. ಲಕ್ಷ್ಮಣರಾವ್

೭೪ ಉಷ್ಣಯಂತ್ರಗಳ ಪರಿಚಯ—ಕೆ. ವಿ. ಸುಬ್ಬರಾಯ

೭೫ ಬಟ್ಟೆಗಳ ವೈಜ್ಞಾನಿಕ ಪರೀಕ್ಷೆ—ಶ್ರೀ ನಾಗಭೂಷಣ

೭೬ ಮಹಾಭಾರತ—ಡಾ|| ಕೆ. ಕೃಷ್ಣಮೂರ್ತಿ

೭೭ ಜೇನು—ಡಿ. ಎಸ್. ಮುರಿಗಪ್ಪ ಶ್ರೇಷ್ಠಿ

೭೮ ಮಾನವಶಾಸ್ತ್ರ—ಡಾ|| ಕೆ. ಎನ್. ವೆಂಕಟರಾಯಪ್ಪ

೭೯ ಅಥರ್ವವೇದ—ಸಿ. ಜಿ. ಪುರುಷೋತ್ತಮ

೮೦ ನೇಮಿಚಂದ್ರ—ಎಸ್. ಅನಂತರಂಗಾಚಾರ್

೮೧-೮೨ ಹಾಸ್ಯ—ಎಸ್. ವಿ. ರಂಗಣ್ಣ

೮೩ ಶ್ರೀನಾಥ—ಕೆ. ವೆಂಕಟರಾಮಪ್ಪ

೮೪ ಷಡಕ್ಷರದೇವ—ದೇ. ಜವರೇಗೌಡ

೮೫ ಚಿತ್ರಾಂಗದಾ—ಯು. ಕೆ. ಸುಬ್ಬರಾಯಾಚಾರ್

೮೬ ಸಂಚಿಯ ಹೊನ್ನಮ್ಮ
—ಎಚ್. ಎಂ. ಶಂಕರನಾರಾಯಣರಾವ್

೮೭ ವಾಲ್ಮೀಕಿ ರಾಮಾಯಣ—ಯು. ಕೆ. ಸುಬ್ಬರಾಯಾಚಾರ್

೮೮ ಜಪಾನರ ಇತಿಹಾಸ ಮತ್ತು ನಾಗರಿಕತೆ—ಕೆ. ಪದ್ಮಾವತಮ್ಮ

೮೯ ಕ್ರಿಶ್ಚಿಯನ್ ಕ್ಯಾಲೆಂಡರ್—ಬಿ. ಸೀತಾರಾಮಶಾಸ್ತ್ರೀ

೯೦ ಆಲ್‌ಫ್ರೆಡ್ ನೊಬೆಲ್—ಎಸ್. ಸುಬ್ರಹ್ಮಣ್ಯಂ

೯೧ ಗೃಹರಚನಾವಿಧಿ—ಕೆ. ಎಸ್. ಸದಾನಂದ

೯೨ ಹಿಂದೂಧರ್ಮಸಾರ—ಸ್ವಾಮಿ ಸೋಮನಾಥಾನಂದ

೯೩ ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳು
—ಟಿ. ಎಸ್. ರಾಜಗೋಪಾಲ ಅಯ್ಯಂಗಾರ್

೯೪ ದಾರಿತಪ್ಪಿದ ಮಕ್ಕಳು—ಎನ್. ಎಸ್. ಶಾಂತಮ್ಮ

೯೫ ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ

೯೬ ಪ್ರೇರಣೆ—ಕೆ. ನಾಗರಾಜಶಾಸ್ತ್ರಿ

೯೭ ಪ್ರಾಣಿಗಳ ರಚನಾ ಕೌಶಲ
—ಎಚ್. ಬಿ. ದೇವರಾಜ ಸರ್ಕಾರ್

೯೮ ಭಾರತೀಯ ರಾಷ್ಟ್ರೀಯತೆಯ ವಿಕಾಸ
—ಎ. ಎಸ್. ನಂಜುಂಡಸ್ವಾಮಿ

೯೯ ಶ್ರೀಹರ್ಷ—ಸಿ. ಅನಂತಾಚಾರ್

೧೦೦ ಪ್ರಸಾರಾಂಗ—ಡಾ|| ಕೆ. ವಿ. ಪುಟ್ಟಪ್ಪ

೧೦೧ ಷಟ್ಸ್ಥಲ ಸಿದ್ಧಾಂತ—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ

೧೦೨ ಶಕ್ತಿವಿಶಿಷ್ಟಾದ್ವೈತವೇದಾಂತ—ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ

೧೦೩ ಉಪನಿಷತ್ ಪರಿಚಯ—ಸ್ವಾಮಿ ಸೋಮನಾಥಾನಂದ
೧೦೪ ತುಲಸೀದಾಸ—ಡಾ॥ ಹಿರಣ್ಮಯ
೧೦೫ ಸಿಹಿಮೂತ್ರರೋಗ—ಡಾ॥ ಎ. ನಾರಾಯಣಪ್ಪ
೧೦೬ ಭಾರತದಲ್ಲಿ ವಿಮೆ—ಕೆ. ಗೋಪಾಲ್
೧೦೭ ಸಕ್ಕರೆ—ಕೆ. ಎಸ್. ಲಕ್ಷ್ಮಣರಾವ್
೧೦೮ ಕಲಾಯ್ಡ್ ವಿಜ್ಞಾನ—ಕೆ. ಎಸ್. ಲಕ್ಷ್ಮಣರಾವ್
೧೦೯ ಎಕ್ಸ್-ಕಿರಣಗಳು—ಕೆ. ಶೇಷಾದ್ರಿ ಅಯ್ಯಂಗಾರ್
೧೧೦ ವೇಮನ—ಕೆ. ವೆಂಕಟರಾಮಪ್ಪ
೧೧೧ ವಾಯುಮಂಡಲ—ಕೆ. ಎಸ್. ಲಕ್ಷ್ಮಣರಾವ್
೧೧೨ ಅಂತರಿಕ್ಷಯಾನ—ವೈ. ವಿ. ಇಂದಿರಾಬಾಯಿ
೧೧೩ ಹತ್ತಿ—ಕೆ. ಎಸ್. ಲಕ್ಷ್ಮಣರಾವ್
೧೧೪ ಕನ್ನಡದಲ್ಲಿ ಅನುಭಾವ ಸಾಹಿತ್ಯ
—ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ
೧೧೫ ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೧೧೬ ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೧೧೭ ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೧೧೮ ನಮ್ಮ ನ್ಯಾಯಾಂಗ—ಆರ್. ಗುರುರಾಜ
೧೧೯ ಸ್ವಾಮಿ ವಿವೇಕಾನಂದ—ಸ್ವಾಮಿ ಸೋಮನಾಥಾನಂದ
೧೨೦ ಗರ್ಭಿಣಿ ಮತ್ತು ಶಿಶುಸಂರಕ್ಷಣೆ—ಡಾ॥ ವಿ. ಎಲ್ ಪಂಡಿತ್
೧೨೧ ಬೆಲೆಗಳ ನಿರ್ಧಾರ ಮತ್ತು ಯೋಜನೆಗಳ ಯಶಸ್ಸು
—ಟಿ. ಬಿ. ಚಂದ್ರಶೇಖರಯ್ಯ
೧೨೨ ಜೀವಸತ್ವಗಳು—ಕೆ. ಎಸ್. ಲಕ್ಷ್ಮಣರಾವ್
೧೨೩ ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ
—ದೇವಂಗಿ ಟಿ. ಚಂದ್ರಶೇಖರ
೧೨೪ ದ್ಯುತಿಸಂಶ್ಲೇಷಣ—ಎಂ. ಆರ್. ರಾಘವೇಂದ್ರರಾವ್
೧೨೫ ಅನುವಂಶೀಯತೆ—ಹಾ. ಬ. ದೇವರಾಜ ಸರ್ಕಾರ್
೧೨೬ ವಿಶ್ವಶಾಂತಿ—ಎಚ್. ಎಲ್. ಮಲ್ಲಯ್ಯ, ಎಂ.ಎ.
೧೨೭ ಭಗವದ್ಗೀತಾ ಸಂದೇಶ—ಸ್ವಾಮಿ ಸೋಮನಾಥಾನಂದ
೧೨೮ ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ

೧೨೯ ಕೆಲವು ಸಾಂಕ್ರಾಮಿಕ ರೋಗಗಳು

—ಡಾ॥ ಎ. ನಾರಾಯಣ

೧೩೦ ವಿಶಿಷ್ಟಾದ್ವೈತ ಸಂಗ್ರಹ—ಎಂ. ಒ. ಎಸ್. ಐಯ್ಯಂಗಾರ್

೧೩೧ ಮಾನವ ಮತ್ತು ಪ್ರಕೃತಿ—ಟಿ. ಜಿ. ಸಿದ್ಧಪ್ಪಾರಾಧ್ಯ

೧೩೨ ಲೀಲಾವತೀಗಣಿತ ಮತ್ತು ಶ್ರೀನಿವಾಸ ರಾಮಾನುಜನ್

—ಬಿ. ಸೀತಾರಾಮಶಾಸ್ತ್ರಿ

೧೩೩ ಗೀತಾಮಾತೆ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ

೧೩೪ ಇಂಡೊನೇಷ್ಯ—ಸಿ. ಕೆ. ಸೂರ್ಯನಾರಾಯಣರಾವ್

ಸಾದಾ ಪ್ರತಿ ೨೫ ಪೈಸೆ ; ಉತ್ತಮ ಪ್ರತಿ ೩೭ ಪೈಸೆ.